# ಅಚಲ

5

ನವೆಂಬರ್ 90–ಜನವರಿ 91, ಬೆಲೆ : ರೂ. 1-50



ಡಾ|| ಬಿ.ಎನ್. ಸುಮಿತ್ರಾಬಾಯಿ
ಆಶಾಪೂರ್ಣದೇವಿ (ದೇವಿ)
ಛಾಯಾ ಬಬ್ಬರ್‌ಸಿಂಗ್
ನೇಮಿಚಂದ್ರ
ಕೋನಿಕಾ
[illegible] ಗೋಳಿ

ಸಂಪುಟ ೬ ಸಂಚಿಕೆ ೫-೬

'ಅಚಲ' ಪತ್ರಿಕೆಯನ್ನು ಪಡೆಯಬಯಸುವವರು ದಯವಿಟ್ಟು ಕೆಳಗಿನ ವಿಳಾಸಕ್ಕೆ ಹತ್ತು ರೂಪಾಯಿಗಳನ್ನು ಎಂ.ಓ/ಡ್ರಾಫ್ಟ್ ಮೂಲಕ ಕಳುಹಿಸಿ.
ಕೂಪನ್‌ನಲ್ಲಿ ತಮ್ಮ ವಿಳಾಸವನ್ನು ಸ್ಪಷ್ಟವಾಗಿ ಬರೆಯಬೇಕು. ಚಂದಾದಾರರು ತಮ್ಮ ವಿಳಾಸ ಬದಲಾದರೆ ಕೂಡಲೇ ಕಾರ್ಡಿನಲ್ಲಿ ಬರೆದು ತಿಳಿಸಬೇಕು.

**ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ**
26, 1ನೇ ಮೇನ್, ವೈಯಾಳಿಕಾವಲ್
ಬೆಂಗಳೂರು–560 003.

ಪುಸ್ತಕ ವಿಮರ್ಶೆಗಾಗಿ ಪುಸ್ತಕ ಕಳುಹಿಸುವವರು ದಯವಿಟ್ಟು ಎರಡು ಪ್ರತಿಗಳನ್ನು ಕಳುಹಿಸಬೇಕಾಗಿ ವಿನಂತಿ.



**ಚಂದಾ ವಿವರ**

| | |
|---|---|
| ವಾರ್ಷಿಕ ಚಂದಾ | : ರೂ 10–00 |
| ಬಿಡಿ ಪ್ರತಿ | : ರೂ 1–50 |
| ವಿಶೇಷ ಪ್ರತಿ | : ರೂ 2–50 |
| ಅಜೀವ ಚಂದಾ | : ರೂ 100–00 |

Printed at PRINTSWELL, 78, 2nd Main Road Nagappa Block, Srirampuram, Bangalore-21 & Published by Dr. G. Ramakrishna on behalf of Jagruthi Mahila Adhyayana Kendra
26, I Main, Vyalikaval, Bangalore-560 003.
Editor : N. GAYATRI

ಆತ್ಮೀಯ ಸಂಗಾತಿಗಳೇ,

ಹೊಸ ವರ್ಷದಲ್ಲಿ ಬರುತ್ತಿರುವ ಮೊದಲ ಅಚಲ ನಿಮ್ಮ ಸಂಗಾತಿಗಳಗೆಲ್ಲ ಹೊಸ ವರ್ಷದ ಶುಭಾಶಯಗಳು ಕಳೆದ ವರ್ಷವಿಡೀ ಕೋಮು ಗಲಭೆಯಿಂದ ಮುಳುಗೆದ್ದ ದೇಶ ಯುದ್ಧದ ಭೀಕರ ಪರಿಣಾಮದಿಂದ ಮತ್ತಷ್ಟು ದಣಿದಿದೆ. ಇನ್ನಾದರೂ ಈ ಬಿಸಿ ಆರಲೆಂದು ಆಶಿಸೋಣ.

ನವಂಬರ್-ಜನವರಿಯ ಅಚಲ ಒಟ್ಟಾಗಿ ಬರುತ್ತಿದೆ. ಹಣದ ಮುಗ್ಗಟ್ಟು ಪತ್ರಿಕೆ ಪ್ರಕಟವಾಗದಂತೆ ಮಾಡಿದೆ. ಕಳೆದ ಆರು ವರ್ಷಗಳ ಅವಧಿಯಲ್ಲಿ ಮೊದಲ ಬಾರಿಗೆ ಅಚಲ ಹೀಗೆ ತಡವಾಗಿ ಬಂದಿದೆ. ಇದು ಮತ್ತೆ ಮರುಕಳಿಸದಂತಿರಬೇಕಾದರೆ ನಮಗೆ ಚಂದದಾರರ, ಜಾಹಿರಾತುದಾರರ ಹಾಗೂ ಆಜೀವ ಸದಸ್ಯರ ಸಹಕಾರ ಅತ್ಯಗತ್ಯ. ಕೇವಲ ಪತ್ರಿಕೆಯ ಚಂದಾ ಹಣದಿಂದ ಪತ್ರಿಕೆ ಮುಂದುವರಿಯಲು ಸಾಧ್ಯವಿಲ್ಲ ಎಂಬುದು ನಿಮಗೂ ಗೊತ್ತು. ಹೆಚ್ಚು ಜನ ಪತ್ರಿಕೆಗೆ ಚಂದಾದಾರರಾಗಿ ಪ್ರೋತ್ಸಾಹಿಸಿ.

ಅಚಲಗೆ ಮೊದಲಿನಿಂದಲೂ ಪ್ರೋತ್ಸಾಹ ಕೊಟ್ಟು ಬೆಂಗಾವಲಾಗಿದ್ದ ಹಾಗೂ ನಮ್ಮ ಆಜೀವ ಚಂದಾದಾರರೂ ಆಗಿದ್ದ ಅನುಪಮಾ ನಮ್ಮನ್ನು ಅಗಲಿದ್ದಾರೆ. ಅಚಲ ಅನುಪಮಾರವರಿಗೆ ತನ್ನ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.

**'ಅಚಲ'ಕ್ಕೆ
ಚಂದಾದಾರರಾಗಿ
ಪತ್ರಿಕೆಯ
ಪ್ರಕಟಣೆಗೆ
ನೆರವಾಗಿರಿ**

# ಆಸ್ತಿಯ ಒಡೆತನ ಯಾರಿಗೆ ?

ಜನಗಣತಿಯನ್ನು ಮಾಡುತ್ತಿರುವ ಮಂದಿ ಪ್ರತಿ ಮನೆಗೂ ಹೊಕ್ಕಾಗ ಕೇಳುವ ಸಹಜವಾದ ಪ್ರಶ್ನೆ : 'ಮನೆಯ ಒಡೆಯನ ಹೆಸರೇನು ?' ತಬ್ಬಿಬ್ಬಾದ ನನ್ನ ಗೆಳತಿ ತನ್ನ ಹೆಸರನ್ನೇ ಹೇಳಿದಳು. ಆ ಉತ್ತರದಿಂದ ತೃಪ್ತಿಗೊಳ್ಳದ ಜನಗಣತಿ ಮಾಡುತ್ತಿದ್ದ ವ್ಯಕ್ತಿ ಮತ್ತೊಮ್ಮೆ ಅದೇ ಪ್ರಶ್ನೆ ಹಾಕಿ ನನ್ನ ಗೆಳತಿಯ ಪತಿಯ ಹೆಸರನ್ನು ಕೇಳಿದರು. ಎಣಿಕೆದಾರರು ನನ್ನ ಮನೆಗೆ ಬಂದಾಗ ಮನೆಯು ನನ್ನ ಹೆಸರಿನಲ್ಲಿದ್ದುದರಿಂದ ಮನೆಯ ಒಡೆಯನ ಜಾಗದಲ್ಲಿ ನನ್ನ ಹೆಸರನ್ನು ಬರೆಯುವುದಕ್ಕೆ ನನ್ನ ಗಂಡನ ವಿರೋಧವಿಲ್ಲವೇ ? ಎಂದು ನನ್ನ ಗಂಡನನ್ನೇ ಪ್ರಶ್ನಿಸಿದರು.

ಈ ಪ್ರಶ್ನೆ-ಉತ್ತರಗಳನ್ನು ಇಲ್ಲಿ ಉಲ್ಲೇಖಿಸಲು ಕಾರಣ ಇಷ್ಟೇ, ಇವು ನಿರ್ದಿಷ್ಟ ಸಂಸ್ಕೃತಿಯ ಪರಿಸರದಲ್ಲಿ ಮೂಡಿಬಂದುವಾದ್ದರಿಂದ ಸ್ತ್ರೀ-ಪುರುಷ ಸಂಬಂಧದ ಗ್ರಹಿಕೆಯನ್ನು ಕುರಿತಂತೆ ಸಮಾಜದ ಅಭಿಪ್ರಾಯವನ್ನು ಇವು ಸೂಚಿಸುತ್ತವೆ ಎಂಬುದನ್ನು ಹೇಳಲು. 'ಮನೆಯ ಒಡೆಯ' ಎಂದರೆ ಯಾರು ? ಕುಟುಂಬದ ದೈನಂದಿನ ಆಗುಹೋಗುಗಳನ್ನು ನಿಯಂತ್ರಿಸುವವನೆಂದೇ ? ವಯಸ್ಸಿನಲ್ಲಿ ಹಿರಿಯನೇ ? ನಮ್ಮ ಸಮಾಜ 'ಮನೆಯ ಒಡೆಯ'ನ ಜಾಗದಲ್ಲಿ ಹೆಣ್ಣನ್ನು ಕಲ್ಪಿಸಿಕೊಳ್ಳುವುದು ಅಪವಾದವಾಗಿ ಮಾತ್ರ: ಆದೋ ಅವಳು ಅವಿವಾಹಿತಳಿರಬೇಕು, ಇಲ್ಲವೇ ವಿಧವೆಯಾಗಿರಬೇಕು ಅಥವಾ ವಿಚ್ಛೇದಿತಳಿರಬೇಕು, ದುಡಿಯಲಿ ದುಡಿಯದಿರಲಿ ಗಂಡನಿರದ ಹೆಣ್ಣನ್ನು ಮನೆಯ ಒಡತಿಯಾಗಿ ನಮ್ಮ ಸಮಾಜ ಗ್ರಹಿಸಲು ಕಷ್ಟಪಡುತ್ತದೆ. ಅದಕ್ಕೇ 'ಗಂಡು ದಿಕ್ಕಿಲ್ಲದ ಮನೆ'ಯ ಕಲ್ಪನೆ ನಮ್ಮ ಸಮಾಜಕ್ಕಂತೂ ಅಪೂರ್ಣವಾದದು, ಇಲ್ಲವೇ ಕೆಲವೊಮ್ಮೆ ಸಂತಾಪ ಸೂಚಿಸುವ ವಿಷಯವೂ ಆಗಿಬಿಡುತ್ತದೆ. ಈ ಮನೆಯ ಒಡೆತನವನ್ನು ಕುರಿತಾದ ಪ್ರಶ್ನೆ ಆಸ್ತಿಯ ಒಡೆತನಕ್ಕೂ ಸಂಬಂಧಿಸಿದುದಾಗಿದೆ. ಹುಟ್ಟಿದ ಮನೆ ಮತ್ತು ಸೇರಿದ ಮನೆಯೆರಡರಲ್ಲೂ ಆಸ್ತಿಯಿಂದ ವಂಚಿತಳಾಗುವ ಹೆಣ್ಣು ಯಾವುದೋ ಒಡೆಯನೊಬ್ಬನ ಬಾಲವಾಗಿಯೇ ಉಳಿಯಬೇಕಾಗುವುದು ತಾತ್ವಿಕ ಪ್ರಶ್ನೆಯಷ್ಟೇ ವಾಸ್ತವ ಸತ್ಯ ಕೂಡ.

'ಹುಟ್ಟಿದ ಹೆಣ್ಣು ಕುಲಕ್ಕೆ ಹೊರಗು' ಎಂಬ ನಾಣ್ಣುಡಿ ನಮ್ಮ ಸಂಸ್ಕೃತಿಯ ಒಂದು ಭಾಗವಾಗಿದೆ. ಕೇವಲ ನಾಣ್ಣುಡಿಯಾಗಿ ಉಳಿದಿಲ್ಲ, ನಮ್ಮ ಸಂಸ್ಕೃತಿಯ ನರನಾಡಿಗಳಲ್ಲಿ, ಆಚಾರ ವಿಚಾರಗಳಲ್ಲಿ ಸ್ಪಷ್ಟವಾಗಿ ಈ ನಂಬಿಕೆ ಉಳಿದು ಬಂದಿದೆ. ಯಾವ ಕಾನೂನಿನ ಪ್ರಭಾವವನ್ನು ಅಷ್ಟಾಗಿ ತಟ್ಟಿಸಿಕೊಳ್ಳದೆ ಬಲವಾಗಿ ಉಳಿದು ಬಂದಿದೆ. ಹೆತ್ತವರಿಂದ, ಹುಟ್ಟಿದ ಮನೆಯಿಂದ 'ಕನ್ಯಾದಾನ' ಮಾಡಿಸಿಕೊಂಡು ಪರರ ಮನೆಯಲ್ಲೂ ಪರಕೀಯರಾಗುವ ಹೆಣ್ಣು ಮಕ್ಕಳ ಮಾನಸಿಕ ಅಭದ್ರತೆಯನ್ನು ಅವರಲ್ಲದೆ ಬೇರೆಯವರು ಊಹಿಸಿಕೊಳ್ಳುವುದು ಕಷ್ಟ. ಚರಿತ್ರೆಯಿಂದಲೂ ಪುರುಷನ ಆಸ್ತಿಯಾಗಿಯೇ ಬಂದಿರುವ, ಇಲ್ಲವೇ ಆಸ್ತಿವಂತ ಪುರುಷನ ಮಗಳಾಗಿ, ಹೆಂಡತಿಯಾಗಿ ಇಲ್ಲವೇ ತಾಯಿಯಾಗಿ ಆಶ್ರಯ ಪಡೆದುಕೊಂಡು ಬಂದಿರುವ ಹೆಣ್ಣಿಗೆ ಆಸ್ತಿಯೆನ್ನುವುದು ಗಗನ ಕುಸುಮವೇ. ಇಷ್ಟಾದರೂ ಈ ಶತಮಾನದ ಉತ್ತರಾರ್ಧದಲ್ಲಿ ಹೆಣ್ಣಿಗೆ ಆಸ್ತಿಯನ್ನು ಕೊಡಬೇಕೆನ್ನುವ ಪ್ರಗತಿದಾಯವಾದ ನಿರ್ಣಯದತ್ತ ಸಾಕಷ್ಟು ಪ್ರಯತ್ನಗಳು ನಡೆದಿವೆ 1933ರ

ಮಹಿಳಾ ಆಸ್ತಿಯ ಮೈಸೂರು ಕಾಯ್ದೆ, 1937ರ ಹಿಂದೂ ಮಹಿಳೆಯ ಆಸ್ತಿಯ ಹಕ್ಕಿನ ಕೇಂದ್ರ ಕಾಯ್ದೆ, 1956ರ ಹಿಂದೂ ಉತ್ತರಾಧಿಕಾರಿ ಕಾಯ್ದೆ, ಈ ದಿಕ್ಕಿನತ್ತ ನಡೆಸಿದ ಕೆಲವು ಪ್ರಯತ್ನಗಳು ಆದರೆ ಈ ಕಾಯ್ದೆಗಳು ಜಾರಿಯಾಗಲು ಬೇಕಾದ ಸೂಕ್ತವಾದ ಪರಿಸರ ನಿರ್ಮಾಣವು ಆಗಿಲ್ಲ ವೆನ್ನುವುದು ಸತ್ಯ.

ಹಿಂದೂ ಉತ್ತರಾಧಿಕಾರ ಕಾಯ್ದೆಗೆ ಮೊಟ್ಟಮೊದಲ ಬಾರಿಗೆ 1986ರಲ್ಲಿ ತಿದ್ದುಪಡಿ ತಂದು 'ಪಿತ್ರಾರ್ಜಿತ ಆಸ್ತಿ'ಯಲ್ಲಿ ಹೆಣ್ಣುಮಕ್ಕಳಿಗೆ ಸಮಾನ ಹಕ್ಕು ನೀಡಿದ ಹಿರಿಮೆ ಆಂಧ್ರಪ್ರದೇಶದ್ದು. ತಮಿಳುನಾಡು ಸರ್ಕಾರ ಇದೇ ದಿಕ್ಕಿನಲ್ಲಿ ಯೋಚಿಸಿ 1990ರಲ್ಲಿ ಪಿತ್ರಾರ್ಜಿತ ಆಸ್ತಿಯಲ್ಲಿ ಹೆಣ್ಣು ಮಕ್ಕಳಿಗೆ ಸಮಾನಹಕ್ಕು ನೀಡುವಂತಹ ಕಾಯ್ದೆಯನ್ನು ತಂದಿದೆ. ಆದರೆ ಕರ್ನಾಟಕದಲ್ಲಿ 1987ರಿಂದಲೂ ಇದಕ್ಕಾಗಿ ಪ್ರಯತ್ನಗಳು ನಡೆಯುತ್ತಿದ್ದು, ವಿಷಯವು ಸಾಕಷ್ಟು ಚರ್ಚೆಗೊಳ ಗಾಗಿದ್ದರೂ ಕಾಯ್ದೆಯಾಗಿ ಜಾರಿಗೊಳ್ಳುವ ಹಂತವನ್ನು ಆಸ್ತಿ ಹಕ್ಕು ಕಾಯಿದೆ ತಲುಪಿಲ್ಲ. ಇತ್ತೀಚೆಗೆ ಶಾಸನ ಸಭೆಯಲ್ಲಿ ಹಾಗೂ ಸಾರ್ವಜನಿಕವಾಗಿ ಭಾರಿ ಚರ್ಚೆಗೊಳಗಾಗಿ 1990ರ ಹಿಂದೂ ಉತ್ತರಾಧಿಕಾರಿ (ಕರ್ನಾಟಕ ತಿದ್ದುಪಡಿ) ಕಾಯ್ದೆಯ ಕರಡು ಮಸೂದೆಗೆ ಬೆಂಬಲಕ್ಕಿಂತ ಹೆಚ್ಚು ವಿರೋಧಗಳು ಕಂಡು ಬರುತ್ತಿವೆ. ಇಂತಹದೊಂದು ಮಸೂದೆಯ ಅಗತ್ಯವನ್ನು ಸರಕಾರ ಗುರ್ತಿಸಿ ತಿದ್ದುಪಡಿಗೆ ಕಾರಣವನ್ನು ಸ್ಥೂಲವಾಗಿ ಹೀಗೆ ಗುರುತಿಸಿದೆ.

* ಹೆಣ್ಣಾಗಿ ಹುಟ್ಟಿರುವ ಕಾರಣದಿಂದಷ್ಟೇ ಹುಟ್ಟಿನಿಂದ ಬರಬೇಕಾದ ಆಸ್ತಿಯ ಒಡೆತನವನ್ನು ಪನ್ನು ಹೊಂದಲಾಗದ ಅಸಮಾನತೆಯನ್ನು ಸರಿಪಡಿಸಲು.

* ನಿಂದನಾರ್ಹ ವರದಕ್ಷಿಣೆಯ ಪದ್ಧತಿಯನ್ನು ರಚನಾತ್ಮಕ ಮಾರ್ಗದಿಂದ ನಿರ್ಮೂಲನ ಮಾಡಿ ಹಿಂದೂ ಸಮಾಜದಲ್ಲಿ ಮಹಿಳೆಯರ ಸ್ಥಾನಮಾನವನ್ನು ಇನ್ನೂ ಮೇಲ್ಮಟ್ಟಕ್ಕೆ ತರಲು.

ಈ ಉದ್ದೇಶವೇನೋ ಸೊಗಸಾಗಿದೆ. ಹಾಗೆಯೇ ತಿದ್ದುಪಡಿಯ ಬಹಳಷ್ಟು ಅಂಶಗಳು ಪ್ರಯೋಜನಕಾರಿಯಾಗಿದ್ದರೂ ಈ ಮಸೂದೆ ಕೆಲವೊಂದು ನ್ಯೂನತೆಗಳಿಂದಲೂ ಬಳಲುತ್ತದೆ. ಮುಖ್ಯವಾಗಿ ವಿವಾಹಿತ ಹೆಣ್ಣಿಗೆ ಈ ಪಿತ್ರಾರ್ಜಿತ ಆಸ್ತಿಯ ಹಕ್ಕನ್ನು ನಿರಾಕರಿಸುವುದ ರಿಂದ ಅವಳಿಗೆ ಅನ್ಯಾಯ ಮಾಡಿದಂತಾಗುತ್ತದೆ. ಹೆಣ್ಣು ವಿವಾಹಿತಳಿರಲಿ ಇಲ್ಲದಿರಲಿ ಅವಳಿಗೂ ಪುರುಷನೊಂದಿಗೆ ಸಮಸಮವಾಗಿ ಆಸ್ತಿಹಕ್ಕು ಸಿಗುವ ಅವಕಾಶವಿರಬೇಕು. ಇಷ್ಟಾಗಿ 1956ರ ಕಾಯ್ದೆಯ ಲಾಭವನ್ನು ಪಡೆದುಕೊಂಡವರತೇ ನಮ್ಮಲ್ಲಿ ಬಹಳಷ್ಟು ಮಂದಿ ಇಲ್ಲ. ಅಷ್ಟೇ ಅಲ್ಲ ನಮ್ಮ ಕಾನೂನಿನ ನಿಧಾನ ನಡೆಯಲ್ಲಿ ನ್ಯಾಯದೊರಕಿಸಿಕೊಳ್ಳುವುದಕ್ಕೆ ಸಾಕಷ್ಟು ಆರ್ಥಿಕ ಬಲ, ಆತ್ಮ ಸ್ಥೈರ್ಯ, ಧೈರ್ಯ ತೀರ ಅಗತ್ಯ. ಅಷ್ಟೇ ಅಲ್ಲ ಮಹಿಳೆಯರಿಗೆ ಆಸ್ತಿಹಕ್ಕಿನ ಕಾಯಿದೆಯನ್ನು ನಿರಾಕರಿಸುವುದರ ವಿರುದ್ಧ ವ್ಯವಸ್ಥಿತ ಪ್ರತಿಭಟನೆ ನಡೆಯಬೇಕು.

ಹಿಂದೆಂದಿಗಿಂತ ಇಂದು ಹೆಣ್ಣಿನ ಸಮಸ್ಯೆಗಳು ಹಲವಾರು ಮುಖಗಳನ್ನು ಪಡೆಯುತ್ತಿವೆ. ಅವಿವಾಹಿತ ಹೆಣ್ಣು, ವಿಚ್ಛೇದಿತ ಹೆಣ್ಣು, ನಿರಾಶ್ರಿತ ಹೆಣ್ಣು, ವಿಧವೆ-ಇವರೆಲ್ಲರಿಗೂ ಆರ್ಥಿಕ ಭದ್ರತೆ ಜೀವನದ ಮುಖ್ಯ ಪ್ರಶ್ನೆಯಾಗುತ್ತದೆ. ಆಸ್ತಿಯಲ್ಲಿ ಸಮಪಾಲು ಕೊಡುವ ಕ್ರಮವು ಇವರಿಗೆ ಮರ್ಯಾದೆಯ ಜೀವನವನ್ನು ಸಾಗಿಸಲು ಅನುವು ಮಾಡಿಕೊಡುವುದಲ್ಲದೆ ಆತ್ಮಸ್ಥೈರ್ಯವನ್ನು, ಬದುಕನ್ನು ಪ್ರೀತಿಸುವುದನ್ನು ಕಲಿಸುತ್ತದೆ. ಬದುಕಲು ಅನ್ಯಮಾರ್ಗವಿಲ್ಲದೆ, ವಸ್ತುಸ್ಥಿತಿಯನ್ನು ಒಪ್ಪಿಕೊಳ್ಳಲಾಗದೆ ಆತ್ಮಹತ್ಯೆ ಮಾಡಿಕೊಂಡಿರುವ ಹೆಣ್ಣುಗಳೆಷ್ಟೋ ! ಈ ದಿಸೆಯಿಂದ ನೋಡಿದಾಗ ಲಂತೂ ಮಹಿಳೆಯರಿಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಸಮಾನ ಹಕ್ಕು ನೀಡುವ ಕ್ರಮ ಒಂದು ಕ್ರಾಂತಿ

(26ನೇ ಪುಟಕ್ಕೆ)

# ಬೆಂಕಿಪೊಟ್ಟಣ

□ ಆಶಾಪೂರ್ಣದೇವಿ

ಮಹಿಳೆಯರನ್ನು ನಾನು ಬೆಂಕಿಪೊಟ್ಟಣಕ್ಕೆ ಹೋಲಿಸುವೆ. ಏಕೆ ಗೊತ್ತೆ ? ಬೆಂಕಿಪೊಟ್ಟಣದ ಹೊರಮೈನಂತೆ ಅವರು ನಿಶ್ಚಲವಾಗಿರುತ್ತಾರೆ. ಬೆಂಕಿಪೊಟ್ಟಣದಂತೆ ಅವರೊಳಗೆ ಕೂಡ ಡೈನಮೇಟ್ ಇರುತ್ತದೆ. ಇದು ಭಾರಿ ಸ್ಫೋಟವನ್ನೇ ಉಂಟುಮಾಡಬಹುದು.

ಬೆಂಕಿಪೊಟ್ಟಣಕ್ಕೆ ಮಹಿಳೆಯರನ್ನು ಹೋಲಿಸಿದೆನಲ್ಲ, ಉಧಾಹರಣೆ ಕೊಡುವೆ, ನೋಡಿ.

ಅದೋ ಆ ರಸ್ತೆಯಲ್ಲಿನ ಮೂರು ಅಂತಸ್ತಿನ ಮನೆಯನ್ನು ನೋಡಿ. ಅಂದು ಭಾನುವಾರ. ವಾರದ ಬಟ್ಟೆ ಒಯ್ಯಲು ಧೋಬಿ ಬಂದಿದ್ದಾನೆ. ನೋಮಿತಾ ಕೂಡ ಧೋಬಿಗೆ ಬಟ್ಟೆ ಕೊಡಲು ಅಜಿತನ ಶರ್ಟ್ ಮತ್ತು ಪ್ಯಾಂಟ್‌ಗಳನ್ನು ಪರೀಕ್ಷಿಸುತ್ತಿದ್ದಾಳೆ. ಧೋಬಿಗೆ ಕೊಡುವ ಮುನ್ನ ಜೇಬುಗಳನ್ನು ನೋಡಬೇಕಲ್ಲ ? ಆಗ ದಿಢೀರನೆ ಅವಳ ಕೈಗೆ ಸಿಕ್ಕಿ ಬಿದ್ದಿತು ಮುದುರಿದ್ದ ಒಂದು ಪತ್ರ. ಅಂಚೆ ಕವರ್‌ನಲ್ಲಿದ್ದ ಪತ್ರವದು. ಆದರೆ ಕವರ್ ಒಡೆಯಲಾಗಿತ್ತು. ಕವರ್ ಮೇಲೆ ಅವಳದೇ ಹೆಸರಿತ್ತು.

ನೋಮಿತಾಳ ಮೈ ಉರಿದುಹೋಯಿತು. ಹಾಸಿಗೆ ಮೇಲೆ ಕೂತು ಕವರ್ ತೆರೆದಳು. ಮೊದಲು ಪತ್ರ ಬರೆದ ದಿನಾಂಕ ನೋಡಿದಳು. ಪತ್ರವು ಮೂರು ದಿನಗಳ ಹಿಂದೆಯೇ ಬಂದಿರಬೇಕು. ಅಂಚೆ ಮುದ್ರೆಯನ್ನು ಪರಿಶೀಲಿಸಿದಳು. ಪತ್ರ ಮೂರುದಿನಗಳ ಹಿಂದೆ ಬಂದದ್ದು ಎಂಬುವುದರಲ್ಲಿ ಸಂಶಯವೇ ಉಳಿಯಲಿಲ್ಲ. ಅಜಿತ ಪತ್ರ ಒಡೆದು ಓದಿದ್ದಾನೆ; ಜೇಬಿಗೆ ತುರುಕಿದ್ದಾನೆ. ನೋಮಿತಾಗೆ ಪತ್ರ ತೋರಿಸಬೇಕೆಂದೂ ಅವನಿಗನಿಸಿಲ್ಲ.

ನೋಮಿತಾಳ ಒಳಗೆ ಹುದುಗಿದ್ದ ಬೆಂಕಿ ಜ್ವಾಲೆಯಾಡತೊಡಗಿತು. ಇಡೀ ದೇಹ ಉರಿಯತೊಡಗಿತು. ಏಕೆಂದರೆ ಇದು ಮರೆವಿನ ವಿಷಯವೇ ಅಲ್ಲ. ಅಜಿತ ಉದ್ದೇಶಪೂರ್ವಕವಾಗಿ ಮಾಡಿದುವುದಿದು. ಇದು ಅಜಿತನ ಹವ್ಯಾಸವಾಗಿ ಹೋಗಿದೆ.

ಅವರದು ಸಮಷ್ಟಿ ಕುಟುಂಬ. ಆ ಮನೆಯಲ್ಲಿ ಇಪ್ಪತ್ತೈದು ಜನರಾದರೂ ಇರಬಹುದು. ಆದರೂ ಬಂದ ಪತ್ರಗಳನ್ನು ಹಾಕುವ ಪೆಟ್ಟಿಗೆಯ ಬೀಗದ ಕೈ ಅಜಿತನ ಬಳಿಯೇ ಇರುತ್ತದೆ. ಸಾಮಾನ್ಯವಾಗಿ ಅವನು ನೋಮಿತಳ ಪತ್ರವನ್ನು ಓದುತ್ತಾನೆ. ನಂತರವೇ ಅದು ಅವಳ ಕೈ ಸೇರುವುದು. ಎಷ್ಟೋ ಬಾರಿ ಅವನು ಅದನ್ನು ಅವಳ ಕೈಗೂ ಕೊಡುವುದಿಲ್ಲ. ಹಾಗೆಂಬುದು ನೋಮಿತಾಳ ಅನಿಸಿಕೆ.

ನಿಜ ಹೇಳಬೇಕೆಂದರೆ ಈವರೆಗೆ ಅಜಿತನಿಗೆ ಶಂಕೆ ಉಂಟುಮಾಡುವಂಥ ಒಂದೇ ಒಂದು ಪತ್ರವೂ ಸಿಕ್ಕಿರಲಿಲ್ಲ. ಆದರೂ ಅವನ ಈ ಹೇಯ ಪ್ರವೃತ್ತಿ ಅವನನ್ನು ಬಿಟ್ಟಿರಲಿಲ್ಲ. ನೋಮಿತಾ ಏನು ಸುಮ್ಮನಿದ್ದಳೇ? ಕೂಗಾಡಿದ್ದಳು, ಕಠಿಣವದ ಪ್ರಯೋಗ ಮಾಡಿದ್ದಳು, ದೂಷಿಸಿದ್ದಳು....ಯಾವುದೂ ಫಲ ನೀಡಿರಲಿಲ್ಲ. ಕೊನೆಗೆ ಪ್ರೀತಿಯಿಂದ ಗದರಿಸಿ ನೋಡಿದ್ದಳು. ಊಹೂ....ಅದೂ ಕೂಡ ಕಿವುಡನಿಗೆ ಹೇಳಿದಂತಾಗಿತ್ತು.

ಈಗ ನೋಮಿತಾಳ ಕೈಯಲ್ಲಿ ಅವಳ ಅಮ್ಮನ ಪತ್ರವಿದೆ. ಸ್ವಲ್ಪ ಸಮಯ ಹಾಗೆ ಕೂತು ಸಿಟ್ಟು ತಡೆದುಕೊಂಡಳು. ಶಾಂತವಾದ ಮೇಲೆ ಪತ್ರ ಓದಿದಳು. ಗಂಭೀರವಾದ ವಿಷಯವೇನಿರಲಿಲ್ಲ. ಆಕೆ ತನ್ನ ಎಂದಿನ ರೀತಿಯಲ್ಲಿ ತನ್ನೆಲ್ಲ ಸಮಸ್ಯೆ, ಸಂಕಷ್ಟಗಳನ್ನು ಪಟ್ಟಿ ಮಾಡಿದ್ದಳು. ರೂಮಿನ ಮೇಲ್ಛಾವಣಿ ಸೋರುತ್ತಿದೆ, ತುರ್ತು ದುರಸ್ತಿಯಾಗಬೇಕಾಗಿದೆ, ಇಲ್ಲವಾದರೆ ಅದು ಕುಸಿದು ಅವಶೇಷಗಳಡಿ ಸಾಯಬಹುದು. ಆದರೆ ರಾಣಿಯಂಥ ಮಗಳು ಹಾಗೂ ಉದಾರ ಮನೋಭಾವದ ಅಳಿಯ ಹಾಗಾಗಲು ಅವಕಾಶ ಕೊಡುವುದಿಲ್ಲವೆಂಬ ಭರವಸೆ ಇದೆ. ಆದುದರಿಂದ....ಎಂದು ನೋಮಿತಾಳ ತಾಯಿ ಬರೆದಿದ್ದಳು.

ನೋಮಿತಾಳ ತಾಯಿ ವಿಧವೆ. ಹಾಗೂ ಬಡವಳು.

ಆದರೆ ನೋಮಿತಾಳ ಮದುವೆ ಶ್ರೀಮಂತ ಕುಟುಂಬ ದೊಂದಿಗೆ ನೆರವೇರಿತ್ತು. ಅದಕ್ಕೆ ಅವಳ ಸೌಂದರ್ಯವೇ ಕಾರಣ. ತಾಯಿ ಮದುವೆಗೆ ಹೆಚ್ಚು ಖರ್ಚುಮಾಡುವ ಸ್ಥಿತಿಯಲ್ಲಿಯೂ ಇರಲಿಲ್ಲ. ಆದರೂ ಮಗಳಿಗೆ ಎಂಥ ಗಂಡನನ್ನು ಹುಡುಕಿದೆ ಎಂದು ಹೇಳಿಕೊಂಡು ಶ್ರೀಮಂತ ಮಗಳಿಂದ ಸಹಾಯ ಪಡೆಯಲು ಸದಾ ಮನಗೊಡುತ್ತಿದ್ದಳು. ನೋಮಿತಾಳ ತಾಯಿಯ ಪತ್ರ ಬಂದಾಗಲೆಲ್ಲ ಅಜಿತ "ಪತ್ರ ಓದಲು ಸಮಯ ಏಕೆ ಹಾಳುಮಾಡುವೆ.... ಮನಿ ಆರ್ಡರ್ ಫಾರಂ ತುಂಬುವೆ ತಾಳು.... !" ಎಂದು ಛೇಡಿಸುತ್ತಿದ್ದ.

ಅವಮಾನ ಹಾಗೂ ಸಂಕೋಚದಿಂದ ನೋಮಿತಾ ಕುಗ್ಗಿಹೋಗುತ್ತಿದ್ದಳು. ಕಾರ್ಡಿನಲ್ಲಿ ಪತ್ರ ಬರೆಯಬೇಡ ಎಂದು ಇತ್ತೀಚೆಗಷ್ಟೇ ಅವಳು ತಾಯಿಗೆ ಪತ್ರ ಬರೆದಿದ್ದಳು. ಅಜಿತನಿಗೆ ತಿಳಿಯದಂತೆ ತಾಯಿಗೆ ರಹಸ್ಯವಾಗಿ ಹಣ ಕಳುಹಿಸಲು ಅವಳು ನಿರ್ಧರಿಸಿದ್ದಳು, ಈಗ, ಕವರ್‌ನಲ್ಲಿ ಬರೆದ ಪತ್ರದ ಗತಿ ಏನಾಯಿತು ನೋಡಿ.

ತಕ್ಷಣ ನೋಮಿತಾಳಿಗೆ ತಾಯಿಯ ಮೇಲೆ ಕೋಪ ಉಂಟಾಯಿತು. ಅವಳೇಕೆ ಭಿಕ್ಷುಕಿಯಂತೆ ಆಡುತ್ತಾಳೆ ? ನೋಮಿತಾಳ ಆತ್ಮಗೌರವವನ್ನು ನುಚ್ಚು ನೂರಾಗುವ ಪರಿಸ್ಥಿತಿಗೇಕೆ ತಂದೊಡ್ಡಬೇಕು ? ಇಲ್ಲ ಈ ಬಾರಿ ಖಂಡಿತಾ ತಾಯಿಗೆ ಸಹಾಯ ಮಾಡುವುದಿಲ್ಲ' ಎಂದುಕೊಂಡ ಅವಳು "ನನ್ನಿಂದ ಇನ್ನೇನೂ ನಿರೀಕ್ಷಿಸಬೇಡ" ಎಂದು ಬರೆಯುವುದಾಗಿ ತೀರ್ಮಾನಿಸಿಕೊಂಡಳು.

ಅದೇ ವೇಳೆಗೆ ಅಜಿತ - ಕೋಣೆಯೊಳಗೆ ಬಂದ. ಆಗಷ್ಟೇ ಸ್ನಾನ ಮಾಡಿ ಬಂದದ್ದರಿಂದ ಮನ ಹಗುರವಾಗಿತ್ತು, ಉಲ್ಲಾಸಿತನಾಗಿದ್ದ. ಅವನನ್ನು ಕಂಡು ನೋಮಿತಾಳ ಸಿಟ್ಟು ಮರಳಿತು. ಹುಲಿಯಂತೆ ಘರ್ಜಿಸಿದಳು. "ಈ ಪತ್ರ ಯಾವಾಗ ಬಂತು ?"

ಅಜಿತ ಅವಳತ್ತ ತಿರುಗಿದ. ಪರಿಸ್ಥಿತಿ ಅರ್ಥವಾಯಿತು. ಆ ಪತ್ರವನ್ನೂ ಹರಿದುಹಾಕಬೇಕೆಂದುಕೊಂಡಿದ್ದ. ಇಲ್ಲವಾದರೆ ಇನ್ನಷ್ಟು ಹಣ ಹಾಳಾಗುತ್ತದೆ. ತಾಯಿಯಿಂದ ಪತ್ರ ಬಂದಿದೆ ಎಂಬುದು ನೋಮಿತಾಳಿಗೆ ತಿಳಿಯುವುದೇ ಬೇಡವೆಂದು ಅವನು ಯೋಚಿಸಿದ್ದ. ಎಂಥ ತಪ್ಪಾಗಿಹೋಯಿತು ! ಆ ಪತ್ರದ ವಿಷಯವನ್ನು ಅವನು ಪೂರ್ತಿ ಮರೆತೇ ಬಿಟ್ಟಿದ್ದ.

ಆದರೂ ಅಜಿತ ಅಷ್ಟು ಸುಲಭವಾಗಿ ಬಿಟ್ಟುಕೊಟ್ಟಾನೆಯೆ ? ಅವನು ನೆನಪೇ ಇಲ್ಲದಂತೆ; "ಪತ್ರ ? ಯಾವ ಪತ್ರ ?" ಎಂದು ಹೇಳಿದ. ತುಸು ಯೋಚಿಸುವಂತೆ ಮಾಡಿ, "ಓಹೋ ! ನಿನ್ನ ತಾಯಿಯಿಂದ ಪತ್ರ ಬಂತು. ನಿನಗೆ ಅದನ್ನು ಕೊಡಲು ಪುರುಸೊತ್ತೇ ಆಗಲಿಲ್ಲ. ಸಾರಿ !" ಎಂದ.

"ಏಕೆ ? ಏಕೆ ನನಗೆ ಪತ್ರ ಕೊಡಲಿಲ್ಲ ? ನನ್ನ ಪತ್ರವನ್ನು ನನಗೇಕೆ ಕೊಡಲಿಲ್ಲ ? ಹೇಳು ?"

"ನಾನು ಮರೆತೆ, ಅಷ್ಟೆ, ಅಷ್ಟೆ."

"ಸುಳ್ಳು" ಎಂದು ನೋಮಿತಾ ಕೂಗಿದಳು.

"ಏಕೆ ಕಿರುಚುವೆ ? ಜನರು ಮರೆಯುವುದೇ ಇಲ್ಲವೆ ?

"ಖಂಡಿತಾ ಇಲ್ಲ, ನನ್ನ ಪತ್ರವನ್ನೇಕೆ ಒಡೆದೆ ?" ಇಡೀ ವಿಷಯವನ್ನು ಲಘುವಾಗಿ ತೆಗೆದುಕೊಳ್ಳಲೆತ್ನಿಸಿದ ಅಜಿತ, "ಅದರಿಂದ ಈಗ ಏನಾಯಿತು ? ನನ್ನ ಪತ್ನಿಯ ಪತ್ರ...."

"ಬಾಯಿಮುಚ್ಚು....ಸುಳ್ಳು ಹೇಳಬೇಡ....ನನ್ನ ಪತ್ರ ಒಡೆಯಲು ಎಷ್ಟು ಧೈರ್ಯ ನಿನಗೆ ? ಹಾಗೆ ಮಾಡಬೇಡವೆಂದು ಸಾವಿರಬಾರಿ ಹೇಳಿಲ್ಲವೆ ?"

ನೋಮಿತಾಳ 'ಸ್ಫೋಟ'ದ ಬಗೆಗೆ ಅಜಿತನಿಗೆ ಭಯವಿರಲಿಲ್ಲ. ಆದರೆ ಗಟ್ಟಿಧ್ವನಿಯಲ್ಲಿ ಜಗಳಬೇಕಾಗಿರಲಿಲ್ಲ, ಸಣ್ಣದಾಗಿ ನಗುತ್ತ, "ಏನೀಗ ? ನಿನಗೆ ಯಾರಾದರೂ ಪ್ರೇಮಪತ್ರ ಬರೆಯುತ್ತಿದ್ದಾರೆಯೆ ಎಂಬುದನ್ನು ನಾನು ಪರೀಕ್ಷಿಸಬೇಡವೆ ?" ಎಂದ.

ನೋಮಿತಾ ಕಿರುಚಿದಳು "ನಿಲ್ಲಿಸು, ನೀನು ನೀಚ. ನೀನು ತುಚ್ಛ...."

ಇಷ್ಟಾದ ಮೇಲೂ ಅಜಿತ ಹುಸಿ ನಗೆ ಮುಂದುವರಿಸುವುದು ಸಾಧ್ಯವೇ ? "ಹೌದು ಹೌದು....ತಮ್ಮ ಅಳಿಯನಿಗೆ ಹಣಬೇಕೆಂದು ಬರೆಯುವವರೇ ಒಳ್ಳೆಯವರು. ಏಕಾಏಕಿ ರಾಣಿಯಾಗಿಬಿಟ್ಟಿದ್ದಾಳೆ.... ನಾನು...."

"ಬಾಯಿಮುಚ್ಚು" ಎಂದು ನೋಮಿತಾ ಅರಚಿದಳು.

"ಬಾಯಿಮುಚ್ಚಬೇಕೆ ? ಏಕೆ ? ನಾನು ಅದನ್ನು ಮತ್ತೆ ಹೇಳುವೆ....ಹಾಗೆ ಮಾಡಬೇಕೆಂದು ನನಗೆ ಇಚ್ಛೆಯಾಯಿತು. ನೀನೇನು ಮಾಡುವೆ ? ಏನಾದರೂ ಮಾಡುವುದು ಸಾಧ್ಯವೆ ?" ಎಂದು ಅಜಿತ ದೊಡ್ಡದನಿಯಲ್ಲಿಯೇ ಹೇಳಿದ.

"ನಾನೇನು ಮಾಡೋದಿಲ್ವಾ ? ನನಗೆ ಏನೂ ಮಾಡೋಕೆ ಆಗೊಲ್ವಾ....ಆ....!" ಎಂದು ಒಂದೇ ಉಸಿರಿನಿಂದ ಹೇಳಿದ ನೋಮಿತಾ, "ನಾನೇನು ಮಾಡ್ತೀನೀ ಅಂತ ನೋಡಬೇಕ ?" ಎಂದಳು. ಕಣ್ಣುಮುಚ್ಚಿ ತೆರೆ ಯುವ ಮುನ್ನ, ಒಂದೇ ಕ್ಷಣದಲ್ಲಿ ಅವಳು ಮೇಜಿನ ಮೇಲಿದ್ದ ಬೆಂಕಿಪೊಟ್ಟಣವನ್ನು ಕೈಗೆತ್ತಿಕೊಂಡಳು. ಅಜಿತ ಸಿಗರೇಟಿಗೆಂದು ಬಳಸುತ್ತಿದ್ದ ಬೆಂಕಿಪೊಟ್ಟಣವದು ನೋಡು ನೋಡುತ್ತಿದ್ದಂತೆಯೇ ನೋಮಿತಾ ಒಂದು ಕಡ್ಡಿ ಗೀರಿ ತನ್ನ ಸೀರೆ ಸೆರಗಿನ ತುದಿಗೆ ಬೆಂಕಿ ಹಚ್ಚಿ ಕೊಂಡಳು. ಒಂದೇ ಕ್ಷಣದಲ್ಲಿ ಸೀರೆ ಹತ್ತಿಕೊಂಡಿತು. ಚಕಿತನಾದ ಅಜಿತ ಹಾರಿಬಂದು ಸೆರಗನ್ನು ತನ್ನ ಎರಡೂ ಕೈ ಮಧ್ಯೆ ಹಿಡಿದು ಬೆಂಕಿ ಆರಿಸಿದ.

ನಿಜಹೇಳಬೇಕೆಂದರೆ ಅಜಿತನ ಕೈ ನಡುಗುತ್ತಿತ್ತು. ನೋಮಿತಾಳ ಮುಖವನ್ನು ದಿಟ್ಟಿಸಿ ನೋಡಿದ. ಅವಳ ಮುಖ ಕೆಂಪಾಗಿತ್ತು. ಬಹುಶಃ ಅದು ಕೂಡ ಉರಿಯು ತ್ತಿತ್ತೇನೊ. ಆ ಬೆಂಕಿಯನ್ನು ಕೈನಿಂದ ಶಮನಪಡಿಸುವ ಸಾಹಸವನ್ನು ಅವನು ಮಾಡಲಿಲ್ಲ. ತೀರಾ ಸಾಮಾನ್ಯ ಧ್ವನಿಯಲ್ಲಿ ಮಾತಾಡಲೆತ್ನಿಸಿದ "ನಿಜವಾಗಿಯೂ ಕೋಪ ಬಂದಾಗ ನೀನು ನಿನ್ನ ಅರಿವನ್ನೇ ಕಳೆದುಕೊಳ್ಳುವೆ. ಒಬ್ಬ ಮಹಿಳೆ ಅದು ಹೇಗೆ ತಾಳ್ಮೆಕಳೆದುಕೊಳ್ಳುತ್ತಾಳೆ.... ಹಾ !....ಓಹ್ !"

ಇದಕ್ಕೆ ನೋಮಿತಾಳ ಪ್ರತಿಕ್ರಿಯೆ ಏನೆಂದು ಹೇಳ ಲಾರೆ. ಏಕೆಂದರೆ ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಅಜಿತನ ಅಣ್ಣನ ಮಗಳು ರಿನಿ ಅಲ್ಲಿಗೆ ಬಂದಳು. "ಆಂಟಿ, ಧೋಬಿ ಎಷ್ಟು ಹೊತ್ತು ಕಾಯುತ್ತಾನೆ ? ನೀವು ಬಟ್ಟೆ ಕೊಡ ದಿದ್ದರೆ-ಹಾಗೆಂದು ಅವನಿಗೆ ಹೇಳಿಬಿಡಿ" ಎಂದು ರಿನಿ ಒಂದೇ ಉಸಿರಿಗೆ ಮಾತನಾಡಿದಳು. ಒಂದು ಕ್ಷಣ ಯೋಚಿಸುತ್ತ ನಿಂತಳು. ಕೆಳಗಿನ ದೃಶ್ಯ ನೆನಪಾಯಿತು. ಅವಳು ಕೊಳೆ ಬಟ್ಟೆಗಳನ್ನು ಕೈಗೆತ್ತಿಕೊಂಡು, "ಇನ್ನೊಂದು ನಿಮಿಷದಲ್ಲಿ ಬರುವೆನೆಂದು ತಿಳಿಸು" ಎಂದಳು.

ನೋಮಿತಾ ಸೌಮ್ಯ ಸ್ವಭಾವದವಳಲ್ಲ. ಆದುದರಿಂದ ಯಾರೂ ಅವಳನ್ನು ನೇರವಾಗಿ ಛೇಡಿಸುತ್ತಿರಲಿಲ್ಲ. ಪರೋಕ್ಷವಾಗಿ ಅವಳ ಮೇಲೆ ವಾಗ್ಬಾಣ ಬಿಡುತ್ತಿದ್ದರು. ನೋಮಿತಾ ಕೆಳಗೆ ಬಂದಾಗ, ಎರಡನೇ ಓರಗಿತ್ತಿ, "ಸದ್ಯ ದೇವರ ದಯ. ಕೆಳಗೆ ಇಳಿದು ಬರಲು ಈಗಲಾದರೂ ಸಮಯ ಸಿಕ್ಕಿತಲ್ಲ....ಗಂಡನ ಜೊತೆಗಿರಲು ನಿನಗೆ ವೇಳೆ ಎಂಬುದೇ ಇಲ್ಲ....ಒಂದು ನೆಪ ಬೇಕಷ್ಟೆ....ಪ್ರೀತಿ-ಪ್ರೇಮದ ಬಗ್ಗೆ ಮಾತಾಡಿ ಮಾತಾಡಿ ನಿಮಗಿಬ್ಬರಿಗೂ ಬೇಜಾರಾಗಿಲ್ಲವೆ ?" ಎಂದು ಛೇಡಿಸಿದಳು.

ನೋಮಿತಾ ಸುತ್ತಮುತ್ತ ನೋಡಿದಳು. ಮನೆಯವ ರೆಲ್ಲ ಸೇರುವ ಸಮಯ. ತಾಳ್ಮೆಗೆಡುವಂತಿರಲಿಲ್ಲ; ಧ್ವನಿ ಏರಿಸುವಂತಿಲ್ಲ ಅವಳೂ ನಗುತ್ತ. "ಓಹ್ ! ನೀವೇನು ಹೇಳುವುದು ? ಬೇಕಾದರೆ ಬಾಗಿಲ ಸಂದಿಯಿಂದ ನೋಡಿ ನಾವು ಮಾತಾಡುವುದೆಲ್ಲ ವಾಗ್ಯುದ್ಧವೇ....ನನ್ನನ್ನು ನಂಬಿ !"

ಓರಗಿತ್ತಿ ಜೋರಾಗಿ ನಕ್ಕಳು, "ಓ ! ನೋಮಿತಾ.... ಶಬ್ದಗಳೊಂದಿಗೆ ಆಟವಾಡಬೇಡ. ನಾವೇನು ಹುಲ್ಲು ತಿನ್ನುತ್ತಿದ್ದೇವೆಯೋ ? ನಾವೇನೂ ರಹಸ್ಯವಾಗಿ ನೋಡ ಬೇಕಾಗಿಲ್ಲ ದಿನವಿಡೀ ಗಮನಿಸುತ್ತಿದ್ದೇವಲ್ಲಾ...."

ನೋಮಿತಾ ಕೆನ್ನೆ ಕೆಂಪಾಯಿತು, ತುಟಿ ಅಲುಗಿಸಿ, "ಹೋಗಿ ದೀದಿ...."ಎಂದಳು.

ಆ ವೇಳೆಗೆ ಹಿರಿಯ ಓರಗಿತ್ತಿ ಅಲ್ಲಿಗೆ ಬಂದರು. "ತರ ಕಾರಿ ಹಚ್ಚಿದ್ದಾಯ್ತಾ ? ಅಥವಾ ಸದಾ ಹರಟೆಯಲ್ಲಿ ಮುಳುಗುವಿರೊ ?" ಎಂದು ಕೇಳಿದ ಆಕೆ, ದಿಢೀರನೆ ಚಕಿತಗೊಂಡು "ನೋಮಿತಾ, ಏನಿದು ? ಏನಾಗಿ ಹೋಗಿದೆ ? ಸೀರೆ ತುದಿಯನ್ನು ಅದ್ಹೇಗೆ ಸುಟ್ಟು ಕೊಂಡೆ ?" ಎಂದು ಕೇಳಿದರು.

ಒಂದು ಕ್ಷಣ ನೋಮಿತಾಗೆ ಏನು ಹೇಳಬೇಕೆಂಬುದೇ ತಿಳಿಯಲಿಲ್ಲ. ಮರುಗಳಿಗೆಯಲ್ಲಿ ತನ್ನ ಸೀರೆ ತುದಿ ಮುಟ್ಟಿ ನಗುತ್ತಾ ಹೇಳಿದಳು : "ನೀವು ಹೇಳಿದಂತೆ ಕೇಳದಿದ್ದರೆ ಏನಾಗುತ್ತದೆ ನೋಡಿ. ಕುದಿಯುವ ನೀರಿನ ಪಾತ್ರೆ ಯನ್ನು ಸ್ಟೌವ್‌ನಿಂದ ಇಳಿಸಲು ಸೆರಗನ್ನು ಉಪಯೋಗಿ ಸಿದೆ. ಅದರ ಪರಿಣಾಮ ಇದು"

ನೋಮಿತಾ ಅಲುಗೆಡ್ಡೆ ಬುಟ್ಟಿಯನ್ನು ತನ್ನತ್ತ ಎಳೆದುಕೊಂಡಳು. ಅದರ ಸಿಪ್ಪೆ ತೆಗೆಯುತ್ತ ತನ್ನ ತಾಯಿಯ ಪತ್ರದ ಬಗ್ಗೆ ಯೋಚಿಸತೊಡಗಿದಳು. ಹೇಗೆ ಹಣ ಕಳುಹಿಸುವುದು ? ಇನ್ನು ಮುಂದೆ ನೆರವು ನಿರೀಕ್ಷಿಸ ಬೇಡ ಎಂದು ಬರೆಯುವುದು ಸಾಧ್ಯವಿಲ್ಲವೆಂದು ತೋರಿತು.

(10ನೇ ಪುಟಕ್ಕೆ)



## ಮನೆಗೆ ಮರಳಿ




"ಕಛೇರಿಗಳಲ್ಲಿ ಕೆಲಸ ಮಾಡುವುದನ್ನು ನಿಲ್ಲಿಸಿ, ಪುರುಷರೊಂದಿಗೆ ಸ್ಪರ್ಧಿಸುವುದನ್ನು ನಿಲ್ಲಿಸಿ ಮನೆಗೆ ಮರಳಿ" ಎಂದು ಕರೆ ನೀಡಿದ ಸುಪ್ರೀಂಕೋರ್ಟಿನ ಶ್ರೇಷ್ಠ ನ್ಯಾಯಾಧೀಶ ರಂಗನಾಥ ಮಿಶ್ರಾರವರು ಈಗ ತಾವು ಆಡಿದ ಮಾತನ್ನು ತಾವೇ ಅನುಭವಿಸಬೇಕಾಗಿದೆ.

ಮಹಿಳಾ ಚಳವಳಿಗೆ, ಮಹಿಳೆಯರ ಸಮಾನತೆ ಹಕ್ಕಿಗೆ ಧಕ್ಕೆಯುಂಟುಮಾಡಿದ್ದಕ್ಕಾಗಿ ಸಿಡಿದೆದ್ದ ಮಹಿಳಾ ಸಂಘಟನೆಗಳ ಆಕ್ರೋಶದ ಅರಿವು ಈಗ ರಂಗನಾಥ ಮಿಶ್ರಾರವರಿಗೆ ತಗುಲಿ ತಹತಹಿಸಬೇಕಾದ ಪ್ರಸಂಗ ಒದಗಿ ಬಂದಿದೆ.

ನಾನು ಈ ಮಾತುಗಳನ್ನು ಸುಪ್ರೀಂಕೋರ್ಟಿನ ಶ್ರೇಷ್ಠ ನ್ಯಾಯಾಧೀಶನಾಗಿ ಆಡಲಿಲ್ಲ. ಕೇವಲ ರಂಗನಾಥ ಮಿಶ್ರಾ ಆಗಿ ಆಡಿದೆ ಎಂದೇ ತಮ್ಮನ್ನು ಸಮರ್ಥಿಸಿ ಕೊಳ್ಳುತ್ತಾ, ತಮಗಿರುವ 'ಇಬ್ಬಗೆ' ವ್ಯಕ್ತಿತ್ವದ ಬಗ್ಗೆ ತಾವೇ ಡಾಣಾಡಂಗುರ ಹೊಡೆಯುತ್ತಿದ್ದ ಮಿಶ್ರಾ ಈಗ ಬೇಷರತ್ತಾಗಿ ತಾವು ಆಡಿರುವ ಎಲ್ಲಾ ಮಾತುಗಳನ್ನು ಹಿಂತೆಗೆದುಕೊಂಡಿದ್ದಾರೆ.

ಬ್ರಹ್ಮಕುಮಾರಿ ಸಂಘಟನೆ ಏರ್ಪಡಿಸಿದ್ದ ಧಾರ್ಮಿಕ ಸಮಾರಂಭದಲ್ಲಿ ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದ ಮಿಶ್ರಾ ಮಹಿಳೆಯರ ವಿರುದ್ಧ ತಮ್ಮ ವಾಗ್ಝರಿ ಹರಿಯ ಬಿಟ್ಟರು.

ಪ್ರತಿಯೊಂದಕ್ಕೂ ಪುರುಷರೊಂದಿಗೆ ಸ್ಪರ್ಧಿಸುವು ದನ್ನು ಬಿಟ್ಟು ಮನೆಗೆ ಮರಳಿರಿ ಎಂಬುದು ಅವರ ಪ್ರಮುಖ ಆಗ್ರಹ.

"ಸಂವಿಧಾನದಲ್ಲಿ ಮಹಿಳೆಯರಿಗೆ ಸಮಾನ ಸ್ಥಾನ ನೀಡಿರುವುದು ವಾಸ್ತವವಾದುದಲ್ಲ. ಏಕೆಂದರೆ ದೇವರು ಪುರುಷ ಹಾಗೂ ಮಹಿಳೆಯನ್ನು ಸಮಾನವಾಗಿ ಸೃಷ್ಟಿಸ ಲಿಲ್ಲ" ಎಂಬ ಹೇಳಿಕೆ ಹೊರಟಿದ್ದು ಸಂವಿಧಾನದ ವಕ್ತಾರ ರಾದ ಶ್ರೇಷ್ಠ ನ್ಯಾಯಾಧೀಶರಿಂದ ಎಂಬುದು ಇಡೀ ರಾಷ್ಟ್ರದ ಜನತೆಯನ್ನು ಬೆಕ್ಕಸಬೆರಗಾಗಿಸಿತು.

ಇಷ್ಟು ಮಾತ್ರ ಅಲ್ಲವೆಂಬಂತೆ ಮಹಿಳೆ ಸಮಾನತೆ ಕೇಳಿದರೆ ಪ್ರೀತಿ ಅಳಿಯುತ್ತದೆ. ಮಹಿಳೆಯರು ಉದ್ಧಾರ ವಾದರೆ ವಿಶ್ವ ಉದ್ಧಾರವಾಗುವುದಿಲ್ಲ. ಮಹಿಳೆಯರು ಮಹಿಳೆಯರಾಗೇ ಇದ್ದರೆ ಮಾತ್ರ ವಿಶ್ವ ಅಭ್ಯುದಯ ಗೊಳ್ಳುತ್ತದೆ.

ಇಷ್ಟೆಲ್ಲಾ ವಾದಿಸುವ ಅವರು ತಮ್ಮ ಮಾತನ್ನು ಸಮರ್ಥಿಸಿಕೊಳ್ಳುವುದು ಹೀಗೆ. ಮಹಿಳೆ ಪುರುಷರಿಗಿಂತ ನೂರಾರುಪಟ್ಟು ಮೇಲ್ಮಟ್ಟದವಳು. ಮಹಿಳೆಯರನ್ನು ದೇವರು ಎಂದು ಪೂಜಿಸಲಾಗಿದೆ. ಮಹಿಳೆ ಮನೆಯನ್ನು ಚೆನ್ನಾಗಿ ನಿರ್ಮಿಸಲು ಸಾಧ್ಯವಿರುವುದರಿಂದ ಮಹಿಳೆ ಕಛೇರಿ ಬಿಟ್ಟು ಮನೆಗೆ ತೆರಳಲಿ"

"ಕೆಲವಾರು ವರ್ಷಗಳಿಂದ ಮಹಿಳೆಯ ಸ್ಥಾನ (ಅಂದರೆ ದೇವರಸ್ಥಾನ) ದಿಂದ ಕೆಳಗಿಳಿಸಿದ ತಪ್ಪು ನಡೆದಿದೆ. ಸಂವಿಧಾನ ಪ್ರಕಾರ ತಮಗೆ ಸಮಾನತೆ ಬೇಕು ಎಂದು ಅವರು ಹೇಳುತ್ತಾರೆ. ದೇವರ ಸ್ಥಾನ ದಿಂದ ಕೆಳಗಿಳಿದು ಮಹಿಳೆಯರು ಪುರುಷರೊಂದಿಗೆ ಸಮಾನ ಸ್ಥಾನಬೇಕು ಎನ್ನುತ್ತಾರೆ. ನಾವು ಮಹಿಳೆಯರಿಗೆ ಹೆಚ್ಚು ಹಕ್ಕು ನೀಡಬೇಕು ಎನ್ನುವವರು. ನಾವು, ನಾನು ನ್ಯಾಯಾಲಯದಲ್ಲಿ ಜಾರಿ ಮಾಡುವ ಮಹಿಳೆಯರ ಹಕ್ಕುಗಳನ್ನು ರಕ್ಷಿಸುವ ವಿಧಿಗಳ ಬಗ್ಗೆ ಯೋಚನೆ ಮಾಡುವುದು ಬೇಡ"

ನಮ್ಮ ಧಾರ್ಮಿಕ ರೀತಿಯ ಪ್ರಕಾರ ಮಹಿಳೆಗೆ ಹೆಚ್ಚಿನ ಸ್ಥಾನ ನೀಡೋಣ. ಮಹಿಳೆ ಪೂಜಿಸಲ್ಪಡಬೇಕಾದ ದೇವತೆ ನಾನು ಅಕೆಗೆ ಆ ಸ್ಥಾನ ನೀಡಲು ಸಿದ್ಧನಿದ್ದೇನೆ. ಎಂದರು. ಸಮಾನತೆ ಕೇಳುವುದು ತಪ್ಪಾದ ಹೆಜ್ಜೆ. ದೇವರು ಪುರುಷ ಹಾಗೂ ಮಹಿಳೆಯನ್ನು ಸಮಾನವಾಗಿ ಸೃಷ್ಟಿಸಿಲ್ಲ. ಪುರುಷರಿಗೆ ವಿಶೇಷ ಅಧಿಕಾರವಿದೆ. ಎಲ್ಲಕ್ಕೂ ಸ್ಪರ್ಧಿಸುವುದರ ಬಗ್ಗೆ ಯೋಚಿಸಬೇಡಿ. ಸಮಾನತೆಬೇಕು ಎಂದು ನೀವು ಹೊರಟರೆ ಪ್ರೀತಿ ಪ್ರೇಮ ಅಳಿಯುತ್ತದೆ" ಎಂಬ ಧಾರಾಕಾರ ಸಲಹೆಗಳನ್ನು ನೀಡಿದರು.

ಮೊದಲನೆಯದಾಗಿ ಇದು ನಡೆದದ್ದು ಮಹಿಳೆಯರ ಸಭೆಯಲ್ಲಿ ಎಂಬುದು ವಿಶೇಷ ಅಂಶ. ಮಹಿಳೆಗೆ ಸಮಾನತೆ ಬೇಡ ಎಂಬುದಕ್ಕೆ ಈ ಸಭೆಯಲ್ಲಿ ಕಿಂಚಿತ್ ಪ್ರತಿಭಟನೆಯೂ ವ್ಯಕ್ತವಾಗಲಿಲ್ಲ. ಮಿಶ್ರಾರವರಂತಹ ಅಂಧಕಾರ ಮನಸ್ಸುಗಳು ಇನ್ನೂ ಸಾವಿರಾರು ಇವೆ. ಎಂಬುದಕ್ಕೆ ಇದು ಸಾಕ್ಷಿಯಾಗಿತ್ತು. ಜಡ ಚೇತನಗಳು ಇಲ್ಲಿ ಒಗ್ಗೂಡಿದ್ದವು.

ಮಿಶ್ರಾರವರು "ಯತ್ರ ನಾರ್ಯಸ್ತು ಪೂಜ್ಯಂತೇ ತತ್ರ ರಮಂತೇ ದೇವತಾಃ" ಎಂಬ ಹಳೆಯ ಮಾತುಗಳಿಗೇ ಮತ್ತೆ ಜೀವ ಕೊಟ್ಟಿದ್ದರು. ಮಿಶ್ರಾರವರ ಮಾತಿನ ಬಗ್ಗೆ ಬೆಳಕು ಚೆಲ್ಲಿ ಬಯಲಿಗೆಳೆದ ಟೈಮ್ಸ್ ಆಫ್ ಇಂಡಿಯಾ ತನ್ನ ಮಾರನೆಯ ದಿನದ ಸಂಪಾದಕೀಯದಲ್ಲಿ ಮಿಶ್ರಾರವರನ್ನು ಚೆನ್ನಾಗಿ ತರಾಟೆಗೆ ತೆಗೆದುಕೊಂಡಿತು.

ಮಿಶ್ರಾ ಇಂತಹ ಹೇಳಿಕೆ ನೀಡುವುದರ ಮೂಲಕ ಇತಿಹಾಸದ ಕಸದಬುಟ್ಟಿ ಸೇರಿಹೋಗಿರುವ ಇವರ ಪೂರ್ವಿಕ ಮಾತುಗಳನ್ನೇ ಪುನರುಚ್ಚಿಸಿದ್ದಾರೆ. ಇಂತಹ ಮಿಶ್ರಾ ಶ್ರೇಷ್ಠ ನ್ಯಾಯಾಧೀಶರಾಗಿ, ಇನ್ನೆಂತಹ ತೀರ್ಪು ನೀಡಲು ಸಾಧ್ಯ ? ಮಹಿಳೆಯರು ಕಚೇರಿಗಳಲ್ಲಿ ಲಿಂಗ ಭೇದದ ಸಮಸ್ಯೆ ಎದುರಿಸುವಾಗ, ಅತ್ಯಾಚಾರ ಪ್ರಕರಣಗಳಲ್ಲಿ ನ್ಯಾಯಾಲಯದ ಮುಂದೆ ನಿಂತಾಗ ಇವರು ಏನು ತಾನೆ ನ್ಯಾಯ ನೀಡುತ್ತಾರೆ ? ಫಾತಿಮಾ ಬೀವಿ ಸುಪ್ರೀಂ ಕೋರ್ಟ್‌ನ ಪ್ರಥಮ ನ್ಯಾಯಾಧೀಶರಾಗಿರುವುದನ್ನು ಹೇಗೆ ಸಹಿಸುತ್ತಾರೆ ಎಂದು ಟೈಮ್ಸ್ ಆಫ್ ಇಂಡಿಯಾ ಪ್ರಶ್ನಿಸಿದೆ.

ನ್ಯಾಯಾಧೀಶ ಮಿಶ್ರಾರವರ ಹೇಳಿಕೆಯನ್ನು ರಾಷ್ಟ್ರದ ಪ್ರಮುಖ ಮಹಿಳಾ ಸಂಘಟನೆಯಾದ ಅಖಿಲ ಭಾರತ ಪ್ರಜಾಸತ್ತಾತ್ಮಕ ಮಹಿಳಾ ಸಂಘಟನೆ (ಎಐಡಿಡಬ್ಲ್ಯುಎ). ಕೈಗೆತ್ತಿಕೊಂಡಿತು. ದೆಹಲಿಯಲ್ಲಿ ಈ ಹೇಳಿಕೆ ಪ್ರತಿಭಟಿಸಿ ಮೆರವಣಿಗೆ ನಡೆಸಿ ಮಿಶ್ರಾರವರನ್ನು ಭೇಟಿ ಮಾಡಿ ಮನವಿಪತ್ರ ಅರ್ಪಿಸಿತು.

"ಭಾರತದ ಸಂವಿಧಾನದ ಮೂಲಭೂತ ಹಕ್ಕುಗಳಲ್ಲೊಂದಾದ ಸಮಾನತೆಗೆ ನೀವು ವಿರುದ್ಧವಾಗಿದ್ದೀರಿ ಎಂಬುದು ನಿಮ್ಮ ಭಾಷಣದಿಂದ ವ್ಯಕ್ತವಾಗಿದೆ. ರಾಷ್ಟ್ರದ ಆರ್ಥಿಕತೆಗೆ ಮಹಿಳೆಯರ ಮಹಾನ್ ಕೊಡುಗೆಯನ್ನು ನೀವು ಮರೆತಿರಬಹುದು. ಭಾರತದ ಕೃಷಿ ಉತ್ಪಾದನೆ ಮಹಿಳೆಯರನ್ನು ಅವಲಂಭಿಸಿದೆ. ಕನಿಷ್ಠ ಕೂಲಿಗಾಗಿ ಮಹಿಳೆಯರು 10-12 ಗಂಟೆ ಕೆಲಸ ಮಾಡುವುದೇ ಅಲ್ಲದೇ ಮನೆಯ ಸಮಸ್ಯೆಯನ್ನು ಹಂಚಿಕೊಳ್ಳುತ್ತಾರೆ ಎಂಬುದನ್ನು ತಾವು ಮರೆತಿರಬಹುದು. ಆದರೂ ಸಹ ಯಾವ ಹಕ್ಕೂ, ಭದ್ರತೆಯೂ ಮಹಿಳೆಗಿಲ್ಲ ಎಂಬುದನ್ನೂ ತಾವು ಮರೆತಿರಬಹುದು" ಎಂದು ಮನವಿ ಪತ್ರದಲ್ಲಿ ತಿಳಿಸಲಾಗಿತ್ತಲ್ಲದೆ ಈ ಬಗ್ಗೆ ಬಹಿರಂಗವಾಗಿ ಕ್ಷಮೆ ಯಾಚಿಸಿ ಇಲ್ಲವೆ ಆ ಸ್ಥಾನದಿಂದ ಕೆಳಗಿಳಿಯಿರಿ ಎಂದು ಒತ್ತಾಯಿಸಿತು.

ನಿಯೋಗದೊಂದಿಗೆ ಮಿಶ್ರಾ ಮಾತನಾಡುತ್ತಾ "ನಾನು ವೈಯುಕ್ತಿಯ ನೆಲೆಯಲ್ಲಿ ಈ ಹೇಳಿಕೆ ನೀಡಿದ್ದೇನೆ ಹೊರತು ಶ್ರೇಷ್ಠ ನ್ಯಾಯಾಧೀಶನಾಗಿ ಅಲ್ಲ" ಎಂದರು.

ಇದನ್ನು ಒಪ್ಪದ ಅಖಿಲ ಭಾರತ ಪ್ರಜಾಸತ್ತಾತ್ಮಕ ಮಹಿಳಾ ಸಂಘಟನೆ ಇತರೆ ಸಂಘಟನೆಗಳೊಡನೆ ಸೇರಿ ರಾಷ್ಟ್ರ ಚಳವಳಿಗೆ ಕರೆ ನೀಡಿತು.

ಈ ಮಧ್ಯೆಯೇ ಮಹಿಳಾ ರಕ್ಷತಾ ಸಮಿತಿ, ಜನತಾದಳ ಮಹಿಳಾ ವಿಭಾಗ, ಹಿಂದ್ ಮಜ್ದೂರ್ ಪಂಚಾಯತ್, ಹಿಂದ್ ಮಜ್ದೂರ್ ಸಭಾ, ಸಾಮಾಜಿಕ ವಿಜ್ಞಾನ ಸಂಸ್ಥೆ, ಡಾ. ಲೋಹಿಯಾ ಸಮತಾ ಆದಿವಾಸಿ ಕೇಂದ್ರ, ಕ್ರಾಂತಿಕಾರಿ ಸಮಾಜವಾದಿ ಮಂಚ್, ಪರಿವರ್ತನ್ ಸಂಘಟನೆಗಳೂ ಪ್ರತಿಭಟನೆ ನಡೆಸಿದವು.

ಮಿಶ್ರಾಗೆ ಬಿಸಿ ಮುಟ್ಟಲು ಆರಂಭವಾಯಿತು. ತಮ್ಮ ಮಾತು ತಮಗೇ ಇದಿರೇಟಾಗುವ ಮುನ್ಸೂಚನೆ ದೊರೆಯಿತು. ತಕ್ಷಣವೇ ಪ್ರಜಾಸತ್ತಾತ್ಮಕ ಮಹಿಳಾ ಸಂಘಟನೆಯ ಕಾರ್ಯದರ್ಶಿ ಬೃಂದಾ ಕರಾತ್ ಅವರಿಗೆ ಪತ್ರ ಬರೆದು "ತಾವು ನೀಡಿರುವ ಹೇಳಿಕೆಯನ್ನು ಸಂಪೂರ್ಣವಾಗಿ ಹಿಂತೆಗೆದುಕೊಂಡಿದ್ದೇನೆ" ಎಂದು ತಿಳಿಸಿದರು.

"ಮಹಿಳೆಯರ ಸಮಾನತೆ ಹಕ್ಕನ್ನು ಕ್ಷುಲ್ಲಕವಾಗಿ ಕಾಣುವವರಿಗೆ ಇದು ಒಂದು ಪಾಠ" ಎಂದು ಬೃಂದಾ ಕಾರಂತ್ ತಿಳಿಸಿದ್ದಾರೆ.

ಒಬ್ಬ ವ್ಯಕ್ತಿಗೆ ಎರಡು ಮುಖ, ಎರಡು ನೀತಿ, ಅಭಿಪ್ರಾಯ ಇರಲು ಸಾಧ್ಯ ಎನ್ನುವಂತೆ ಮಿಶ್ರಾ ಮಾತುಗಳನ್ನಾಡಿದ್ದಾರೆ. ಮಿಶ್ರಾರವರು ತಪ್ಪೊಪ್ಪಿಕೊಂಡಿದ್ದಾರೆ. ಇದು ಸಂಘಟಿತ ಮಹಿಳಾ ಚಳವಳಿಗೆ ದೊರೆತ ಜಯ. ಆದರೂ ಸಹ ಸಮಸ್ಯೆ ಇಲ್ಲಿಗೆ ಮುಗಿದಿಲ್ಲ. ಬ್ರಹ್ಮಕುಮಾರಿಯರಂತಹ ಜಡ ವ್ಯಕ್ತಿತ್ವಗಳು ಹಾಗೂ ಅನೇಕಾನೇಕ. "ಮಿಶ್ರಾಬಂಧುಗಳು" ಈ ಸಮಾಜದೊಳಗಿದ್ದಾರೆ ಎಂಬುದನ್ನು ಮರೆಯಬಾರದು.



# ಸಾವಿತ್ರಮ್ಮ ಮತ್ತು ಅವರ ಸಮಕಾಲೀನ ಕತೆಗಾರ್ತಿಯರು

□ ಡಾ॥ ಬಿ.ಎಸ್. ಸುಮಿತ್ರಾಬಾಯಿ

ಇತ್ತೀಚೆಗೆ ಡೆಕನ್ ಹೆರಾಲ್ಡ್ ಪತ್ರಿಕೆಯಲ್ಲಿ ಪ್ರಕಟವಾದ, ಮಹಿಳಾ ಸಾಹಿತ್ಯವನ್ನು ಪರಿಚಯಿಸುವ ಶ್ರೀಮತಿ ಆಶಾದೇವಿಯವರು ಬರೆದ ಆಂಗ್ಲ ಲೇಖನವೊಂದರಲ್ಲಿ ನವೋದಯದ ಸ್ತ್ರೀ ಬರಹಗಾರರ ಬಗ್ಗೆ ವ್ಯಕ್ತವಾಗಿರುವ ಅಭಿಪ್ರಾಯವೊಂದು ಹೀಗಿದೆ ; "ನವೋದಯದ ಹಂತದಲ್ಲೂ ಅನೇಕ ಮಹಿಳಾ ಬರಹಗಾರರು ಇದ್ದರಾದರೂ ಅವರು ಸಮಾಜದೊಂದಿಗೆ ಹೊಂದಿದ್ದ ಸಾಮರಸ್ಯದ ಸಂಬಂಧವೇ ಅವರ ಕೃತಿಗಳ ಗಂಭೀರ ಪರಿಮಿತಿಯಾಗಿತ್ತು. ತಾವು ಬದುಕುತ್ತಿದ್ದ ಹಳೆಯ ಜಗತ್ತಿನೊಂದಿಗೆ ಹೊಂದಿದ್ದ ಬಹು ತೆಳುವಾದ ಅಸಹನೆಯೇ ಅವರ ರಚನೆಗಳಲ್ಲಿನ ಬಹು ಮುಖ್ಯ ಅನುಭವವಾಗಿತ್ತು. ಇದನ್ನು ತಿರುಮಲಾಂಬ, . ಎಚ್. ವಿ. ಸಾವಿತ್ರಮ್ಮ. ಎಂ. ಕೆ. ಇಂದಿರಾ, ಶಾಂತಾದೇವಿ ಕಣವಿ ಮತ್ತು ಶಾಂತಾದೇವಿ ಮಾಳವಾಡರ ಕೃತಿಗಳಲ್ಲಿ ಕಾಣುತ್ತೇವೆ. ಪರಂಪರಾಗತ ಭಾರತೀಯ ಸಂಸ್ಕೃತಿಯ ನೆರಳಿನಲ್ಲೇ ಅವರೆಲ್ಲರೂ ಬರೆದರಾದರೂ ಆಗ ಇದ್ದ ಸಾಮಾಜಿಕ ಸಮಸ್ಯೆಗಳ ಬಗ್ಗೆ ಅವರ ಗೊಣಗಾಟಗಳು ಎಂದೂ ಪಿಸುದನಿಗಿಂತ ಮೇಲಕ್ಕೆ ಏರಲೇ ಇಲ್ಲ. ಆದರೆ ತ್ರಿವೇಣಿ, ಅನುಪಮಾ ಮತ್ತು ರಾಜಲಕ್ಷ್ಮಿಯವರು ಬಂದಾಗ ಒಬ್ಬ ಹೊಸ ಹೆಣ್ಣಿನ ಪ್ರವೇಶವಾಯಿತು" (ಡೆಕನ್ ಹೆರಾಲ್ಡ್ 20.1.91)

ಈ ಲೇಖನ ಡೆಕನ್ ಹೆರಾಲ್ಡ್ ಪತ್ರಿಕೆಯಲ್ಲಿ ಬರುತ್ತಿರುವ ಕನ್ನಡ ಸಾಹಿತ್ಯ ಕುರಿತ ಲೇಖನ ಸರಮಾಲೆಯಲ್ಲಿ ಸೇರಿರದಿದ್ದರೆ ಹಾಗೂ ರಾಮಚಂದ್ರಶರ್ಮರಂಥವರು ಇದನ್ನು ಇಂಗ್ಲೀಷಿಗೆ ಅನುವಾದಿಸಿರದಿದ್ದರೆ, ಬಹುಶಃ ಇದೊಂದು ಅಪ್ರಬುದ್ಧ ಹೇಳಿಕೆಯೆಂದು ತಳ್ಳಿಹಾಕಬಹುದಿತ್ತು. ಆದರೆ ಇಂಥ ಅಭಿಪ್ರಾಯವೊಂದು ಬಹು ಜನಪ್ರಿಯವಾಗಿ ವಿಮರ್ಶಕರ ನಡುವೆ ಚಾಲನೆಯಲ್ಲಿರುವುದನ್ನೂ ಅದು ಸೂಚಿಸುವುದರಿಂದ ಇದನ್ನು ಒಂದು ಗಂಭೀರ ಸಂಗತಿಯಾಗಿ ಪರಿಗಣಿಸಿ, ಅದರ ಸತ್ಯಾಸತ್ಯತೆಗಳನ್ನು ಗಮನಕ್ಕೆ ತರುವುದು ಅವಶ್ಯಕವಾಗಿದೆ.

ಮೊದಲನೆಯದಾಗಿ ನವೋದಯದ ಲೇಖಕಿಯರೆಂದು ನಾವು ಗುರುತಿಸಬಹುದಾದ ಲೇಖಕಿಯರಲ್ಲಿ ತಿರುಮಲಾಂಬ, ಸಾವಿತ್ರಮ್ಮನವರಲ್ಲದೆ ಶ್ಯಾಮಲಾದೇವಿ, ಕೊಡಗಿನ ಗೌರಮ್ಮ, ಸರಸ್ವತೀಬಾಯಿ ರಾಜವಾಡೆ, ಬೆಳಗೆರೆ ಜಾನಕಮ್ಮ, ತಿರುಮಲೆ ರಾಜಮ್ಮ, ಕಲ್ಯಾಣಮ್ಮ, ಮುಂತಾದ ಅನೇಕ ಲೇಖಕಿಯರಿದ್ದು ಅವರೆಲ್ಲರೂ ತಮ್ಮ ಕಾಲದ ಸಾಮಾಜಿಕ ಸಮಸ್ಯೆಗಳಿಗೆ

## ಬೆಂಕಿಪೊಟ್ಟಣ

(7ನೇ ಪುಟದಿಂದ)

ಇಡೀ ಗ್ರಾಮಕ್ಕೆ ಅವಳು 'ರಾಣಿ' ಎಂಬುದು ಗೊತ್ತು. ಜತೆಗೆ ಅವಳ ಗಂಡ ಉದಾರಿ ಎಂಬುದೂ.

ಆದುದರಿಂದಲೇ ನಾನು ಮಹಿಳೆಯನ್ನು ಬೆಂಕಿ ಪೊಟ್ಟಣಕ್ಕೆ ಹೋಲಿಸಿರುವುದು. ನೂರಾರು ಬೃಹತ್ ಪ್ರಮಾಣದಲ್ಲಿ ಬೆಂಕಿ ಹಚ್ಚುವಷ್ಟು ಸಾಮರ್ಥ್ಯ ಇದ್ದರೂ ಅವರು ಎಂದೂ ಉದ್ವಿಘ್ನರಾಗಿ ತಮ್ಮ ಗಂಡಂದಿರ ಉದಾತ್ತಗುಣದ ಕವಚವನ್ನು ಸುಡಲು ಯತ್ನಿಸುವುದಿಲ್ಲ. ಜತೆಗೆ ಅವರು ತಮ್ಮ ಹೊರಗಿನ ಬಣ್ಣ, ವ್ಯಕ್ತಿತ್ವವನ್ನೂ ಸ್ಫೋಟಗೊಳಿಸಲಾರರು.

ವಾಸ್ತವವಾಗಿ ಅವರೆಂದಿಗೂ ಬೆಂಕಿಹಚ್ಚುವವರಲ್ಲ. ಇದು ಗಂಡಂದಿರಿಗೂ ಗೊತ್ತು. ಆದುದರಿಂದ ಮನೆಯಲ್ಲಿ ಅವರನ್ನು ಸ್ವತಂತ್ರವಾಗಿ ಚಲಿಸಲು ಬಿಟ್ಟು ಬಿಡುತ್ತಾರೆ. ಜತೆಗೆ ಯಾವುದೇ ಭಯವಿಲ್ಲದೆ ಅವರನ್ನು ತಮ್ಮ ಜೇಬಿನಲ್ಲಿಯೂ ಇಟ್ಟುಕೊಳ್ಳುತ್ತಾರೆ. □

(ಅನುವಾದ : ದೇವಿ)

ಸ್ತ್ರೀಯದೃಷ್ಟಿಯಿಂದ ತೀವ್ರವಾಗಿ ಸ್ಪಂದಿಸಿದವರು. ಅದರಲ್ಲಿ ಹಲವರು ಸಾಮಾಜಿಕ ಕಾರ್ಯಕರ್ತೆಯರಾಗಿ, ಮಹಿಳೆಯರಿಗಾಗಿ ಪತ್ರಿಕೆಗಳನ್ನು ನಡೆಸಿ, ಸ್ತ್ರೀ ಜಾಗೃತಿಗಾಗಿ ಬದುಕಿಡೀ ಮೀಸಲಿಟ್ಟ ಕ್ರಿಯಾಶೀಲ ವ್ಯಕ್ತಿಗಳು. ಅವರ ಬರಹದಲ್ಲಿ ಉದ್ದಕ್ಕೂ ಸಂಪ್ರದಾಯನಿಷ್ಠ ಸಮಾಜದಲ್ಲಿ ಸ್ತ್ರೀಯರ, ಬಡವರ, ದುರ್ಬಲ ವರ್ಗ, ಜಾತಿಗಳ ಜನರ ಮೇಲೆ ಹೇರಿರುವ ನಿರ್ದಯವಾದ ಬಂಧನಗಳ ವಿರುದ್ಧವಾದ ತೀವ್ರ ಪ್ರತಿಭಟನೆಯಿದೆ. ತಮ್ಮ ಕಾಲದ ಸಮಸ್ಯೆಗಳಿಗೆ ಅವರು ಸ್ಪಂದಿಸಿರುವ ಬಗೆಯಿಂದ ಇಂದಿನವರು ಕಲಿಯಬೇಕಾದ್ದು ಬಹಳವಿದೆ. ಈ ಮಾತಿಗೆ ವಿವರಣೆ ಅಗತ್ಯವಿರುವವರು ಮೊಟ್ಟಮೊದಲು ಇಲ್ಲಿ ಒಂದು ದಶಕದಿಂದೀಚೆಗೆ ನಡೆದಿರುವ ಮಹಿಳಾ ಸಾಹಿತ್ಯ ಶೋಧನೆಗಳು, ಅಧ್ಯಯನಗಳು, ವಿಮರ್ಶೆಗಳತ್ತ ನಾವು ನೋಟ ಹರಿಸಬೇಕಾಗಿದೆ. ಮಹಿಳಾ ಸಾಹಿತ್ಯ, ಮಹಿಳಾ ವಿಮರ್ಶೆಯೆಂಬ ಪ್ರತ್ಯೇಕತೆಯನ್ನು ಅಸಗತ್ಯವೆಂದು ನಿರಾಕರಿಸುವ, ಹಾಗೂ ಇಂಥ ಮಾತಿನ ರೂಪದ ನಿರಾಕರಣೆಯ ಮೂಲಕ ವಸ್ತುಸ್ಥಿತಿಯು ಬದಲಾಗಿ ಬಿಡಬಹುದೆಂಬ ಧಾರ್ಷ್ಟ್ಯ ನನಗಿಲ್ಲ. ಬದಲಾಗಿ ತನ್ನ ಬಗ್ಗೆ, ಪರಿಸರದ ಬಗ್ಗೆ, ತನ್ನಂಥ ಇತರರ ಬಗ್ಗೆ ತೀವ್ರ ಅರಿವನ್ನು ಪಡೆದುಕೊಳ್ಳಲು, ತನ್ನ ಸಹಜ ಸ್ಥಾನವನ್ನು ಸಾಮಾಜಿಕ, ರಾಜಕೀಯಾರ್ಥಿಕ ನೆಲೆಗಳಲ್ಲಿ ಸಮರ್ಥಿಸಿಕೊಳ್ಳುವ ಮೂಲಕ ಮಾತ್ರ, "ಪ್ರಧಾನ" "ಅಪ್ರಧಾನ" ವೆಂಬ ವೈಪರೀತ್ಯಗಳಿರದ ಮುಕ್ತವಾದಂಥ ಸಾಹಿತ್ಯವನ್ನು ಸೃಷ್ಟಿಸಲು ಸಾಧ್ಯ ಎಂದು ನಂಬುವವಳು ನಾನು. ಆದ್ದರಿಂದ ಭಾಷೆಯೂ ಒಂದು ರಾಜಕೀಯಾಧಿಕಾರದ ಸಾಧನವಾಗಿರುತ್ತದೆ. ಒಂದು ಭಾಷೆಯಲ್ಲಿ ತನ್ನನ್ನು ಅಭಿವ್ಯಕ್ತಿಸಿಕೊಳ್ಳುವುದೆಂದರೆ ತನ್ನದೇ ಆದ ಭಾಷೆಯೊಂದನ್ನು ಸೃಷ್ಟಿಸಿಕೊಳ್ಳಬೇಕಾದ ಅನಿವಾರ್ಯತೆಯನ್ನೂ ಸ್ವೀಕರಿಸಿದಂತೆ. ಈ ಕ್ರಿಯೆಗಾಗಿ ಪ್ರಚಲಿತ ಭಾಷೆಯಲ್ಲಿನ ಪ್ರತೀಕಗಳು, ಶಬ್ದ ರೂಪಾವಳಿಗಳು, ಪೌರಾಣಿಕ ಪ್ರತಿಮೆಗಳ ಭಂಜನೆ ಅನಿವಾರ್ಯವೆಂದೂ, ಈ ಭಂಜನೆಯ ಕಾರ್ಯಕೂಡ ಮೇಲೆ ಹೇಳಿದ ಸ್ವಂತದ ಅರಿವಿನ ಕಡೆಗೆ ಸಾಗುವ ಯತ್ನವೆಂದೂ ಭಾವಿಸುತ್ತೇನೆ. ಈ ದೃಷ್ಟಿಯಿಂದ ನವೋದಯದ ಬಹುಮುಖ್ಯ ಲೇಖಕಿಯರಲ್ಲಿ ಒಬ್ಬರಾಗಿ ಎಲ್ಲ ಮುಂದಿನ ತಲೆಮಾರುಗಳೊಂದಿಗೆ ಸಾಗಿ, ಇಂದಿಗೂ ಸಮಕಾಲೀನ ಸ್ಪಂದನೆಯೊಂದಿಗೆ ತಮ್ಮ ಬುದ್ಧಿ, ಮನಸ್ಸು, ಬರಹಗಳ ಜೀವಂತಿಕೆಯನ್ನು ಕಾಯ್ದುಕೊಳ್ಳುತ್ತಾ ಬಂದಿರುವ ಸಾವಿತ್ರಮ್ಮನವರ ರಚನೆಗಳ ಸಂದರ್ಭದಲ್ಲಿ ನವೋದಯ, ನವ್ಯ, ನವ್ಯೋತ್ತರ ಸಾಹಿತ್ಯ ಘಟ್ಟಗಳಲ್ಲಿ ಇವರ ನಿಕಟವರ್ತಿಗಳೆನಿಸುವ ಲೇಖಕಿಯರ ರಚನೆಗಳನ್ನೂ ವಿವೇಚಿಸುವುದು ಮಹಿಳಾ ಕಥಾಸಾಹಿತ್ಯದ ಇತಿಹಾಸದ ದೃಷ್ಟಿಯಿಂದ ಮುಖ್ಯವಾದುದೆಂದೂ ಭಾವಿಸುತ್ತೇನೆ. ಈ ಕಾರಣಕ್ಕಾಗಿ ಸಾವಿತ್ರಮ್ಮನವರ ರಚನೆಗಳನ್ನು ನಾನು ಓದಿಕೊಂಡ ಅನುಭವವನ್ನು ಮೊದಲು ಹೇಳಬಯಸುತ್ತೇನೆ.

ಸಾವಿತ್ರಮ್ಮನವರ ಕಥಾಲೋಕ ಮೊದಲನೋಟಕ್ಕೆ ಎಲ್ಲ ಲೇಖಕಿಯರ ರಚನೆಗಳಲ್ಲಿ ಕಾಣಸಿಗುವ ಕೌಟುಂಬಿಕ ಜಗತ್ತನ್ನೇ ಒಳಗೊಂಡಿರುವಂತೆ ತೋರಬಹುದು. ಸುತ್ತಲಿನ ವಾಸ್ತವವನ್ನು ಭಾವನಾತ್ಮಕವಾಗಿ ಆಪ್ತತೆಯ ನೆಲೆಯಲ್ಲಿ ಗ್ರಹಿಸುವುದು, ತರ್ಕಶುದ್ಧಿಗಿಂತಲೂ ಅಂತರ್ದೃಷ್ಟಿಯಿಂದ ಸತ್ಯದ ಹೊಳಹನ್ನು ಗ್ರಹಿಸುವುದು, ಸ್ತ್ರೀ ಸಂವೇದನೆಯ ವಿಶಿಷ್ಟಗುಣವೆಂದು ಒಪ್ಪುವುದಾದರೆ, ಸಾವಿತ್ರಮ್ಮನವರ ರಚನೆಗಳಲ್ಲೂ ಅದು ಪ್ರಧಾನವಾಗಿರುವುದನ್ನೂ ಕಾಣುತ್ತೇವೆ. ಇವರ ನಿಕಟವರ್ತಿ, ಸಮಕಾಲೀನರೆನ್ನಬಹುದಾದ ಗೌರಮ್ಮ, ಶ್ಯಾಮಲಾದೇವಿಯವರಲ್ಲೂ, ಜಾನಕಮ್ಮನವರ ಪದ್ಯಗಳಲ್ಲಿ ಮಲ್ಲಿಗೆಯ ಗಂಧದಂತೆ ವ್ಯಾಪಿಸಿರುವ ಈ ಗುಣವು ಸಾವಿತ್ರಮ್ಮನವರಲ್ಲಿ ಹೆಚ್ಚಿನ ಬಾಧಿತ ಅರಿವಿನೊಂದಿಗೆ ಹದವಾಗಿ ಬೆರೆತಿದೆ, ಇದನ್ನು 'ನಿರಾಶ್ರಿತೆ' (1949) ಮತ್ತು ದಮಯಂತಿ (ಮರು ಮದುವೆ 1954) ಕಥೆಗಳಲ್ಲಿ ನೋಡಬಹುದು,

ಸ್ವಾತಂತ್ರ್ಯಾನಂತರದ ಬಹುದೊಡ್ಡ ದಾರುಣಘಟನೆ ದೇಶವಿಭಜನೆ ಮತ್ತು ಅದರ ಹಿಂದೆಯೇ ಹರಡಿದ ಕೋಮುಗಲಭೆ. ಆ ಅವಧಿಯ ಹಲವು ಲೇಖಕರಿಗೆ ಅದು ವಸ್ತುವಾಗಿದೆ. ಆದರೆ ಆ ದುರಂತದಲ್ಲಿ ನೆಲ ತಪ್ಪಿದ ಸ್ತ್ರೀಯರನ್ನು ಕೇಂದ್ರದಲ್ಲಿಟ್ಟು, ಸ್ತ್ರೀ ಪುರುಷರ ನಡುವಿನ ವೈವಾಹಿಕ ಸಂಬಂಧವನ್ನು, ಅದನ್ನು ಕುರಿತ ಮೌಲ್ಯಗಳನ್ನು ಒರೆಹಚ್ಚಿ ನೋಡುವ ಯತ್ನವಾಗಿ ಈ ಎರಡು ಕಥೆಗಳು ವಿಶಿಷ್ಟವಾಗುತ್ತವೆ. 'ನಿರಾಶ್ರಿತೆ'ಯ ತುಳಸಿ, 'ದಮಯಂತಿ'ಯಲ್ಲಿನ ಅದೇ ಹೆಸರಿನ ನಾಯಕಿ ಇಬ್ಬರೂ ಪ್ರಾರಂಭದಲ್ಲಿ ಸಂಸಾರದಲ್ಲೇ ತನ್ಮಯರಾದ

(14ನೇ ಪುಟಕ್ಕೆ)

# ದುಡಿಯುವ ಮಹಿಳೆಗೆ ನ್ಯಾಯಸಿಗುವುದೇ ?

□ ನೇಮಿಚಂದ್ರ

ನಮ್ಮ ಸಮಾಜ ಸ್ತ್ರೀಯರನ್ನು ದೇವತೆಯರಾಗಿ ಗುಡಿಯಲ್ಲಿಟ್ಟು ಪೂಜಿಸುತ್ತಾರೆ— ಸೀತೆಯಂತೆ ಸೊರಗಿ ಭೂಮಿಯೊಳಗಿಳಿದಾಗ, ಇಲ್ಲ 'ಸತಿ' ಯಾಗಿ ಚಿತೆಗೇರಿದಾಗ. ಅದೇ ಸಮಾಜ ಸಮಾನ ದುಡಿಮೆಯ ಹಕ್ಕು, ಆಸ್ತಿಯ ಹಕ್ಕು ಬಯಸುವ ಹೆಣ್ಣನ್ನೋ, ಅವಿವಾಹಿತಳನ್ನೋ, ವಿಚ್ಛೇದಿತಳನ್ನೋ ಪೂಜಿಸುವುದೆ ? ಹೆಣ್ಣಿನ ಅಸಹಾಯಕತೆಯನ್ನೇ ವಿಜೃಂಭಿಸಿ, ವೈಭವೀಕರಿಸಿ ತಮ್ಮ ಸ್ಥಾನ ಭದ್ರತೆಗೆ ಹೂಡಿದ ಪದಜಾಲ 'ದೇವತೆ' ಎಂಬುದು.

ಮಿಶ್ರಾರಂಥ ನ್ಯಾಯಾಧೀಶರ ಎದುರು ದುಡಿವ ಮಹಿಳೆಯ ಪ್ರಕರಣವೊಂದು ಬಂದರೆ, ಆತನ ನಿರ್ಣಯ ಎಷ್ಟು ನ್ಯಾಯಬದ್ಧವಿರಲು ಸಾಧ್ಯ ? ತಮ್ಮ ವೈಯಕ್ತಿಕ ಪೂರ್ವಾಗ್ರಹಗಳು ಕೆಲಸ ಮಾಡದಿರಲು ಸಾಧ್ಯವೆ ? ಅಥವಾ ಕಛೇರಿಗೊಂದು ವ್ಯಕ್ತಿತ್ವ, ಹೊರಗೊಂದು ವ್ಯಕ್ತಿತ್ವ ಎಂಬ ದ್ವಿಪಾತ್ರ ಅಭಿನಯವೆ ? ಸಂವಿಧಾನದ ಭಾಗ 3ನ್ನು ನಂಬದಿರುವ ವ್ಯಕ್ತಿ (ಈ ಸಂವಿಧಾನದ ಆರ್ಟಿಕಲ್ 14, ಭಾರತದ ಪ್ರತಿಯೊಬ್ಬ ಪ್ರಜೆಗೂ, ಆತ ಯಾವುದೇ ಲಿಂಗ, ಧರ್ಮ, ಜಾತಿಯವನಾಗಲಿ ಸಮಾನತೆಯ ಹಕ್ಕು ನೀಡಿದೆ) ಹೆಂಗಸರಿಗೆ ನ್ಯಾಯ ಒದಗಿಸಿರಬಹುದೆ ಎಂಬ ಅನುಮಾನವಂತೂ ತೀರಾ ಸಹಜವಾಗಿ ಏಳುತ್ತದೆ.

ಆದರೆ ಕೇವಲ ಕ್ಷಮೆ ಯಾಚಿಸಿದೊಡನೆ ಮಿಶ್ರಾರವರ ಹೇಳಿಕೆಗಳು ಮಾಡಿರುವ ಪರಿಣಾಮಗಳು ಸರಿಪಡುವುದಿಲ್ಲ. 'ಮಹಿಳಾ ದಕ್ಷತಾ ಸಮಿತಿ'ಯ ಪ್ರಮಿಳಾ ದಂಡವತೆ ಬಹಳ ಕಟುವಾಗಿ ಹೇಳುತ್ತಾರೆ—"ಆತ ರಾಜಿನಾಮೆ ನೀಡಲೇಬೇಕು. ಸಮಾನತೆಯ ಮೂಲಭೂತ ಹಕ್ಕನ್ನೇ ನಂಬದ ಮನುಷ್ಯನಿಂದ ನ್ಯಾಯ ನಿರೀಕ್ಷಿಸಲು ಸಾಧ್ಯವೆ ? ಹೆಂಗಸರನ್ನು ದೇವತೆಯೆಂದು ಕರೆದು, ಗುಡಿಯಲ್ಲಿಟ್ಟು ಬೀಗ ಜಡಿಯುವುದರಿಂದ ಏನು ಪ್ರಯೋಜನ ? ನಮ್ಮನ್ನು ಮನುಷ್ಯರಾಗಿ ಗೌರವಿಸಿ ಸಾಕು. ನಮಗೆ ಇಂದು ಬೇಕಿರುವುದು ದುಡಿಮೆಯ ಹಕ್ಕು, ಗುಡಿಯ ಅಲಂಕೃತ ಪೀಠವಲ್ಲ. ಅದೂ ಅಲ್ಲದೆ ನಮ್ಮನ್ನು ಮನೆಗೆ ಹೋಗುವಂತೆ ಹೇಳಲು ಆತ ಯಾರು? ಈಳಾ ಭಟ್ ಅವರು 'ಶ್ರಮಶಕ್ತಿ ವರದಿ'ಯ ಪ್ರಕಾರ ಭಾರತದ 35% ಮನೆಗಳು ಸ್ತ್ರೀಯರ ದುಡಿಮೆಯಿಂದ ನಡೆಯುತ್ತಿವೆ. ಇಂಥಾ ಸ್ಥಿತಿಯಲ್ಲಿ ಹೆಣ್ಣನ್ನು ಮನೆ ಗಂಟಿಸುವುದು ಸರಿಯೆ ?" ಎನ್ನುತ್ತಾರೆ.

'ನ್ಯಾಷನಲ್ ಫೆಡರೇಷನ್ ಆಫ್ ಇಂಡಿಯನ್ ವಿಮೆನ'ನ ವಿಮಲಾ ಫರೂಕಿ ಹೇಳುತ್ತಾರೆ—"ನಮ್ಮ ಸಂವಿಧಾನವನ್ನು ಎತ್ತಿಹಿಡಿಯಬೇಕಾದ ಆತನೇ ಇಂಥ ಹಿಂದುಳಿದ ಜಮೀನುದಾರಿ ಹೇಳಿಕೆಗಳನ್ನು ನೀಡಿದ್ದಾರೆ. ಶತಮಾನಗಳಿಂದ ನಾವು ಹೆಂಗಸರು, ಪ್ರತಿ ರಂಗದಲ್ಲೂ ಸಮಾನತೆಗೆ ಸೆಣೆಸಾಡಿ, ಅವಕಾಶ ಸಿಕ್ಕಿದರೆ ಉತ್ಕೃಷ್ಟವಾಗಿ ದುಡಿಯಬಲ್ಲೆವೆಂದು ತೋರಿದ್ದೇವೆ. ಹೀಗಿರುವಾಗ ಈತ ಯಾರು ನಮ್ಮನ್ನು ಮನೆಗಳಿಗೆ ಅಟ್ಟಲು ? ಇಂಥಾ ಮನುಷ್ಯನಲ್ಲಿ ಕೇಸು ಹೋದ ಯಾವ ಹೆಣ್ಣಾದರೂ ಧೈರ್ಯ ಉಡುಗದಿರಲು ಸಾಧ್ಯವೆ ? ಕೇವಲ ಕ್ಷಮೆ ಕೇಳಿದಷ್ಟು ಸಾಕೆ ?" ಎನ್ನುತ್ತಾರೆ.

'ಆಲ್ ಇಂಡಿಯಾ ವಿಮೆನ್ಸ್ ಕಾನ್ಫರೆನ್ಸ್'ನ ಪದ್ಮಾ ಸೇಠ್ ಅವರ ಪ್ರತಿಕ್ರಿಯೆ—"ನಮಗೆ ಏನು ಮಾಡಬೇಕೆಂದು ಹೇಳಲು ಈತ ಯಾರು, ಅದೂ 20ನೇ ಶತಮಾನದ ತುದಿಯಲ್ಲಿ ! ನಿಜಹೇಳಬೇಕೆಂದರೆ, ಇದೆಲ್ಲ ನನಗೆ ಕಾನೂನಿನಲ್ಲಿರೋ ನಂಬಿಕೇನೇ ತೊಡೆದು ಹೋಗುತ್ತಿದೆ. ಅತ್ಯಂತ ವಿಷಾದವೆಂದರೆ ಒಬ್ಬರೇ ಒಬ್ಬ ಸ್ತ್ರೀ ನ್ಯಾಯವಾದಿ ಪ್ರತಿಭಟಿಸಿ ಒಂದು ಮಾತನ್ನೂ ಆಡಿಲ್ಲ. ಇವರೆಲ್ಲ ಕರಿಕೋಟಿನೊಡನೆಯೆ ಹುಟ್ಟಿ ಬಂದಂತಿದೆ. ಇಲ್ಲದಿದ್ದರೆ ಮೌಲ್ಯಗಳಿಗಿಂತ ಇವರಿಗೆ ತಮ್ಮ ಹುದ್ದೆಯೇ ಮುಖ್ಯವಾಗುತ್ತಿತ್ತೆ ? ಕ್ಷಮೆ ಕೇಳಿದ್ದಷ್ಟೆ ಖಂಡಿತಾ ಈ ಪ್ರಕರಣಕ್ಕೆ ಕೊನೆ ಹಾಡೋಲ್ಲ. ಆತ ಓರ್ವ ಸಾಮಾನ್ಯ

## ಅಭಿನಂದನೆ

ಸುಗಂಧಿನಿ ಆರು ವರ್ಷದ ಬಾಲಕಿ. ಬಳ್ಳಾರಿಯ ಸೇಂಟ್ ಫಿಲೋಮಿನಾ ಕಾನ್ವೆಂಟಿನಲ್ಲಿ ಒಂದನೆಯ ತರಗತಿಯಲ್ಲಿ ಓದುತ್ತಿರುವ ವಿದ್ಯಾರ್ಥಿನಿ. ಕಳೆದ ವರ್ಷ, ಆಗಿನ್ನು ಐದು ವರ್ಷದ ಹಸುಳೆ 10 ಕಿ.ಮೀ. ದೂರವನ್ನು 1 ಗಂಟೆ 29 ನಿಮಿಷ 20 ಸೆಕೆಂಡುಗಳಲ್ಲಿ ಓಡಿ ದಾಖಲೆ ಸ್ಥಾಪಿಸಿದ್ದ ಪುಟಾಣಿ ಅಂತರರಾಷ್ಟ್ರೀಯ ಹೆಣ್ಣುಮಕ್ಕಳ ವರ್ಷದ ಸಂದರ್ಭದಲ್ಲಿ ಮತ್ತೊಂದು ದಾಖಲೆ ಸ್ಥಾಪಿಸಿದ್ದಾಳೆ.

ಬಳ್ಳಾರಿಯ ಪ್ರಶಾಂತ್ ಸ್ಪೋರ್ಟ್ಸ್ ಅಸೋಸಿಯೇಷನ್‌ರವರು ವ್ಯವಸ್ಥೆಗೊಳಿಸಿದ್ದ, 'ವಿಶ್ವಶಾಂತಿಗಾಗಿ ಓಟ' ಕಾರ್ಯಕ್ರಮದ ಅಂಗವಾಗಿ 1600 ಕಿ.ಮೀ. ಓಟದ ಕಾರ್ಯಕ್ರಮವನ್ನು ನಡೆಸಿದ ಪುಟಾಣಿಗಳು ಬಳ್ಳಾರಿಯ ಸುಗಂಧಿನಿ (ಆರು ವರ್ಷ), ಶಾಲಿನಿನಾಗರಾಳ್ (10 ವರ್ಷ) ಹಾಗೂ ಸಿ.ಎನ್. ಹರಿ (11 ವರ್ಷ). ಈ ಮಕ್ಕಳು ಡಿಸೆಂಬರ್ ಆರರಂದು ಬಳ್ಳಾರಿಯನ್ನು ಬಿಟ್ಟು ರಾಯಚೂರು, ಧಾರವಾಡ, ಹುಬ್ಬಳ್ಳಿ ಹೀಗೆ 1600 ಕ್ರಿ.ಮೀ. ಕ್ರಮಿಸಿ ಜನವರಿ 26 ರಂದು ಬೆಂಗಳೂರು ವಿಧಾನಸೌಧ ತಲುಪಿದರು,

ಶಾಲಿನಿ ನಾಗರಾಳ್ ಕೂಡ ಬಳ್ಳಾರಿಯ ಸೇಂಟ್ ಫಿಲೋಮಿನಾದ ವಿದ್ಯಾರ್ಥಿನಿ. ಈಕೆಯ ತಾಯಿ ನೀಲಿ ನಾಗರಾಳ್ ಕಾಲೇಜು ವಿದ್ಯಾರ್ಥಿನಿಯಾಗಿದ್ದಾಗ ಕರ್ನಾಟಕ ವಿಶ್ವವಿದ್ಯಾನಿಲಯದ ಅಥ್ಲೆಟ್ ಚಾಂಪಿಯನ್ ಆಗಿದ್ದವರು. ಈ ಕುಟುಂಬದ ಕ್ರೀಡಾ ಪರಿಸರ ಶಾಲಿನಿಯ ಪ್ರತಿಭೆಗೆ ಉತ್ತೇಜನ ಕೊಟ್ಟಿದೆ.

ಈ ಪುಟಾಣಿಗಳ ಸಾಧನೆಗೆ ಅಭಿನಂದಿಸಿ, ಕ್ರೀಡಾಕ್ಷೇತ್ರದಲ್ಲಿ ಇನ್ನೂ ಹೆಚ್ಚಿನದನ್ನು ಸಾಧಿಸಲು ಅಚಲ ಆಶಿಸುತ್ತದೆ.

## ದುಡಿಯುವ ಮಹಿಳೆಗೆ ನ್ಯಾಯ ಸಿಗುವುದೇ ?

ವ್ಯಕ್ತಿಯಾಗಿದ್ದರೆ ಆತನ ಮಾತುಗಳಿಗೆ ಹೆಚ್ಚಿನ ಬೆಲೆ ನೀಡಬೇಕಿರಲಿಲ್ಲ. ಆದರೆ ಆತ ಭಾರತದ ಸ್ತ್ರೀಯರಿಗೆಲ್ಲ ನ್ಯಾಯ ನೀಡುವ ಅಧಿಕಾರದಲ್ಲಿದ್ದಾನೆ. ಈ ಪ್ರಕರಣದ ನಂತರ ಸ್ತ್ರೀಯರ ವಿಶ್ವಾಸವನ್ನು ಆತ ಹೇಗೆ ಗಳಿಸಬಲ್ಲ" ಅನ್ನುತ್ತಾರೆ.

ಮಿಶ್ರಾರವರ ಈ ಪ್ರಕರಣ ಪ್ರತಿಯೊಬ್ಬ ಪ್ರಜ್ಞಾವಂತನಲ್ಲೂ ಒಂದು ಪ್ರಶ್ನೆಯನ್ನು ಎತ್ತುತ್ತದೆ—ಮಿಶ್ರಾರಂಥಾ ಪುರುಷರು, ಮೌನವಾಗಿ ತಲೆದೂಗಿದ ಬ್ರಹ್ಮಕುಮಾರಿಯರು ತುಂಬಿದ ಈ ಸಮಾಜದಲ್ಲಿ ಹೆಣ್ಣಿಗೆ, ಸಮಾನ ದುಡಿಮೆಯ ಮಾನವೀಯ ಹಕ್ಕು ಸಿಗುವುದು ಯಾವಾಗ ?



## ಶುಭಾಶಯಗಳೊಂದಿಗೆ :

ಆತ್ಮೀಯ ಗೆಳೆಯರ ಬಳಗ

ಗೃಹ ನಿರ್ಮಾಣ ಸಹಕಾರ ಸಂಘ (ನಿ)

ಬೆಂಗಳೂರು

# ಸಾವಿತ್ರಮ್ಮ ಮತ್ತು ಅವರ ಸಮಕಾಲೀನ ಬರಹಗಾರ್ತಿಯರು

(11ನೇ ಪುಟದಿಂದ)

ಸಂತೃಪ್ತ ಗೃಹಿಣಿಯರು. ಆದರೆ ದುರಾಚಾರಿಗಳ ಅತ್ಯಾಚಾರಕ್ಕೆ ಬಲಿಪಶುಗಳಾದಾಗ ದಾಂಪತ್ಯದ ಸುಂದರ ಲೋಕ ಭಗ್ನವಾಗಿ, ದಿಕ್ಕುತಪ್ಪಿ ನಿರಾಶ್ರಿತರಾದವರು. ಅವರ ಬದುಕಿನಿಂದ ಎಲ್ಲ ಸುಂದರ ಅಂಶಗಳನ್ನು ಕತ್ತು ಹೊಸಕಿದಂತಹ ಆ ಆಘಾತವನ್ನು ಎದುರಿಸಿ, ಅವರ ಮನಸ್ಸು, ವ್ಯಕ್ತಿತ್ವಗಳು ಹಿಂದಿನ ಪರಾವಲಂಬನೆ, ಕೋಮಲ ಅಸಹಾಯಕತೆಗಳಿಂದ ಮುಕ್ತವಾಗಿತಮ್ಮಷ್ಟಕ್ಕೆ ಸ್ವತಂತ್ರವಾಗಿ ತಮ್ಮ ಬದುಕಿನ ದಾರಿಯನ್ನು ನಿರ್ಣಯಿಸ ಬಲ್ಲ ದಿಟ್ಟೆಯರಾಗುತ್ತಾರೆ. ಸಂಸಾರ ಸುಖಕ್ಕೆ ಎರವಾದರೂ ಬದುಕಿನಲ್ಲಿ ಅವರ ಪ್ರೀತಿ ನಾಶವಾಗುವುದಿಲ್ಲ; ತುಳಸಿ, ಅತ್ಯಾಚಾರದ ಬಳುವಳಿಯಾದ ಕೂಸಿನ ಬಗ್ಗೆ ಮಮತೆ ತಳೆದು ಬದುಕಿನರ್ಥಕಂಡುಕೊಂಡರೆ ದಮಯಂತಿ ತನ್ನಂಥ ಇತರ ನಿರಾಶ್ರಿತೆಯರ ದುಃಖಗಳಲ್ಲಿ ಪಾಲು ಪಡೆದು, ಅವರ ಸೇವೆಯಲ್ಲಿ ತನ್ನ ಸಾರ್ಥಕತೆಯನ್ನು ಸೃಷ್ಟಿಸಿಕೊಳ್ಳುತ್ತಾಳೆ. ಇಂತಹ ಈ ಬದಲಾದ ವ್ಯಕ್ತಿತ್ವದ ಸ್ತ್ರೀಯರು ಮತ್ತೆ ತಮ್ಮ ಗಂಡಂದಿರನ್ನು ಸಂಧಿಸಿದಾಗ ಆ ಪತಿಯಂದಿರ ಸಂದಿಗ್ಧತೆ, ತಳಮಳಗಳನ್ನು ಬಹು ಸೂಕ್ಷ್ಮವಾಗಿ ದಾಖಲಿಸುತ್ತಾರೆ, ಲೇಖಕಿ. ತುಳಸಿ ಮತ್ತೆ ಬಂದರೆ ಸ್ವೀಕರಿಸಲು ಸಿದ್ಧನಿದ್ದ ಚಂದ್ರ ಅವಳು ತನ್ನ ಮಗುವಿನ ಸಮೇತಳಾಗಿಯೇ ತನ್ನನ್ನು ಸ್ವೀಕರಿಸಬೇಕು ಎಂದಾಗ ಅಸಹಾಯಕನಾಗಿ ಪಲಾಯನ ಮಾಡುತ್ತಾನೆ.

ದಮಯಂತಿಯ ಪತಿ ಅವಳು ತನ್ನ ಸ್ವತ್ತೆಂಬ ಭಾವನೆಯನ್ನು ಬಿಡಲಾರ. ಹಾಗೆಯೇ ಅಸಹಾಯಕತೆ ದೈನ್ಯ, ಪಶ್ಚಾತ್ತಾಪಗಳೇನೂ ಇಲ್ಲದೆ ನಗುನಗುತ್ತಾ ಬದುಕನ್ನು ಬಂದಂತೆ ಸ್ವೀಕರಿಸಿದ ಆಕೆ ಅವನಿಗೆ ಹೊಸಬಳು, ಅಸಹನೀಯಳು. ಅವನು ಹೀಗೆ ಇಬ್ಬಂದಿಯಲ್ಲಿರುವಾಗಲೇ ದಮಯಂತಿ ತಾನೇ ಅವನನ್ನು ತಿರಸ್ಕರಿಸಿ ತನ್ನ ವ್ಯಕ್ತಿತ್ವ-ಗುಣಗಳನ್ನು ಪ್ರೀತಿಸುವ ಡಾ॥ ಮಹಮದರನ್ನು ಕೈ ಹಿಡಿಯುತ್ತಾಳೆ. ಎಲ್ಲೂ ಭಾವಾತಿರೇಕವಿಲ್ಲದೆ, ಆಕ್ರೋಶಕ್ಕೆ ಎಡೆಕೊಡದೆ ಸರಳವಾದ ಭಾಷೆಯಲ್ಲ, ಧ್ವನಿಪೂರ್ಣವಾಗಿ ನಿರೂಪಿಸುವ ಈ ಕ್ರಮವು ಗೌರಮ್ಮನವರಲ್ಲಿ, ಶ್ಯಾಮಲಾದೇವಿಯವರಲ್ಲಿ ಕಂಡುಬರುವ ರೀತಿಯದು. ಸಾಮಾನ್ಯಾತಿ ಸಾಮಾನ್ಯ ಮಹಿಳೆಯರು ಹೀಗೆ ಪ್ರಬಲ ಸ್ತ್ರೀ ಪ್ರತೀಕಗಳಾಗುವುದನ್ನು ಶ್ಯಾಮಲೆಯವರಲ್ಲಿ ಇನ್ನೂ ವ್ಯಾಪಕವಾದ ಸಾಮಾಜಿಕ ಪ್ರಜ್ಞೆಯೊಂದಿಗೆ ಕಾಣಬಹುದು. ಗಿರಿಬಾಲೆಯವರ ನಾಯಕಿಯರು ಇದಕ್ಕೆ ವಿರುದ್ಧವಾಗಿ ಬಂಡೆದ್ದು ಆಕ್ರೋಶಿಸುವವರು.

ಸ್ವಾತಂತ್ರ್ಯಾನಂತರದಲ್ಲಿ ಬಂಡವಾಳಶಾಹಿ ಬೆಳೆಯ ತೊಡಗಿದಂತೆ ಶಿಕ್ಷಣ, ಉದ್ಯೋಗ, ಕೌಟುಂಬಿಕ ವಿಘಟನೆಗಳು ಹೆಚ್ಚತೊಡಗಿದಂತೆ ಮಹಿಳೆಯರಲ್ಲಿ ಸ್ವಂತ ಅರಿವು ಹೆಚ್ಚು ತೀವ್ರವಾಗತೊಡಗಿತು. ಅಂಥ ಅರಿವಿನ ಮೊದಲ ಮುಖವನ್ನು ಈ ಅವಧಿಯಲ್ಲಿ ಪ್ರಕಟವಾದ ಸಾವಿತ್ರಮ್ಮನವರ ಕಥಾಸಂಕಲನಗಳಾದ "ನಿರಾಶ್ರಿತೆ" ಮತ್ತು "ಮರುಮದುವೆ"ಗಳಲ್ಲಿ ಕಾಣಬಹುದು. ಐವತ್ತರ ದಶಕದ ಬಹಳಷ್ಟು ಲೇಖಕಿಯರು ತ್ರಿವೇಣಿ, ಅನುಪಮಾ, ಎಚ್. ಎಸ್. ಕಾತ್ಯಾಯಿನಿ, ಸುಶೀಲಾ ಕೊಪ್ಪರ, ಸರೋಜಿನಿ ಮಹಿಷಿ, ಮುಂತಾದವರು ಈ ಅವಧಿಯಲ್ಲಿ ಬದಲಾದ ಸ್ತ್ರೀ ವ್ಯಕ್ತಿತ್ವದ ಹೊಸ ಹೊಸ ಸಾಧ್ಯತೆಗಳನ್ನು, ಸ್ಥಿತ್ಯಂತರ ಸಮಾಜದ ಹೊಸ ಸಮಸ್ಯೆಗಳ ನೆಲೆಯಲ್ಲಿ ಹಿಡಿದಿಡಲು ಯತ್ನಿಸಿದ್ದಾರೆ. ತಿರುಮಲಾಂಬಾ, ಕಲ್ಯಾಣಮ್ಮ, ಗೌರಮ್ಮನವರ ಯುಗದಲ್ಲಿ, ಬಾಲ್ಯ ವಿವಾಹ, ವೈಧವ್ಯ, ಕೇಶಮುಂಡನ, ಸ್ತ್ರೀ ಶಿಕ್ಷಣದ ಅಭಾವ ಮೊದಲಾದವು ಮುಖ್ಯ ಸಮಸ್ಯೆಗಳಾಗಿ ಕಾಡಿದ್ದರೆ ಈಗ ವರದಕ್ಷಿಣೆ, ಯುವಕರ ಪಾಶ್ಚಾತ್ಯೀಕರಣ ವಿಲಾಯತಿ ವಿದ್ಯಾಭ್ಯಾಸ, ವಿವಾಹ ಸಮಸ್ಯೆ, ಬಡತನ, ವೇಶ್ಯಾ ಸಮಸ್ಯೆ. ಜಾತೀಯತೆ, ಕೌಟುಂಬಿಕ ವಿರಸ, ಮುಂತಾದವು ಹೆಣ್ಣಿನ ಬದುಕಿನ ಸಂದರ್ಭದಲ್ಲಿ ಕತೆಗಾರ್ತಿಯರಿಗೆ ವಸ್ತುಗಳಾದವು.

ಈ ಎಲ್ಲ ಲೇಖಕಿಯರು ಗೃಹಿಣಿಯರಾಗಿರುತ್ತಿದ್ದುದರಿಂದ ವಿಜಯಾದಬ್ಬೆಯವರು ಹೇಳುವಂತೆ ಬಹುಶಃ ಕೌಟುಂಬಿಕ ಸಮಸ್ಯೆಗಳನ್ನು "ಒಳಗಿನಿಂದ ಅರಿತು ನಿರೂಪಿಸುವುದು" ಅವರಿಗೆ ಸಾಧ್ಯವಾಗಿರಬೇಕು. ಆದರೆ ಸಮಸ್ಯೆಗಳು ಹೊಸ ಬಗೆಯದಾಗಿದ್ದು, ಹೊಸ ಸ್ತ್ರೀ ಪ್ರತೀಕಗಳನ್ನು ತರಲು ಇವರು ಹವಣಿಸಿದರು ತಮ್ಮ ಆವರಣದ ಮೌಲ್ಯಗಳಿಂದ ಸ್ವತಃ ಮುಕ್ತರಾಗಿಲ್ಲದ ಈ ಲೇಖಕಿಯರು ಆ ಸಾಂಸ್ಕೃತಿಕ ಮಿತಿಗಳನ್ನು ಮೀರಲಾರ

ದವರಾಗಿ ತೋರುತ್ತಾರೆ. ಈ ಮೊದಲು ಯಾವುದು ಅಸಹನೀಯವೆನಿಸಿತ್ತೋ ಅಂತಹ ಸಂಗತಿಗಳನ್ನು ಮಾನವೀಯ ನೆಲೆಯಲ್ಲಿ ಸಹ್ಯವಾಗಿಸುವ ಯತ್ನವನ್ನು ಅವರು ಮಾಡಿದ್ದಾರಾದರೂ ತ್ರಿವೇಣಿ ವಿವಾಹದ ಚೌಕಟ್ಟಿನೊಳಗೇ ಎಲ್ಲಸಮಸ್ಯೆಗಳ ಪರಿಹಾರ ಅರಸುವುದು, ಅದೇ ದಿಕ್ಕಿನಲ್ಲಿ ಹೊರಟ ಅನುಪಮಾ ತಮ್ಮ ಪ್ರಗತಿ ಶೀಲತೆಯ ಸರಿಯಾದ ಸೂತ್ರಹನ್ನು ಗ್ರಹಿಸಲು ಎಷ್ಟೋ ದೀರ್ಘಕಾಲ ತೆಗೆದುಕೊಳ್ಳಬೇಕಾದದ್ದು ಮತ್ತು ವಾಣಿ, ಶಾಂತಾದೇವಿ ಕಣವಿ, ಗೀತಾ ಕುಲಕರ್ಣಿ, ಮುಂತಾದವರು ಪೂರ್ಣವಾಗಿ ಸಂಪ್ರದಾಯದ ಗಡಿಯೊಳಗೇ ಬರೆಯು ವುದನ್ನು ಈ ರೀತಿ ಆವರಣದ ಪ್ರಭಾವವನ್ನು ಮೀರ ಲಾರದ್ದರ ಕುರುಹು ಎನ್ನಬಹುದು. ಈ ಹಿನ್ನೆಲೆಯಲ್ಲಿ ಸಾವಿತ್ರಮ್ಮನವರ ಪ್ರಗತಿಶೀಲತೆಯ ಸೂಚಕವಾದ 'ಪಶ್ಚಾತ್ತಾಪ' ಮತ್ತು 'ಮೇನಕೆ'ಯಂಥ ಕತೆಗಳು ಗಮನೀಯವಾಗಿವೆ.

'ಪಶ್ಚಾತ್ತಾಪ' ಕಥೆಯಲ್ಲಿ ಸಂಪ್ರದಾಯಬದ್ಧ ಕುಟುಂಬದಲ್ಲಿ ಬೆಳೆಸಲ್ಪಟ್ಟ ಹೆಂಡತಿ. ಹೊಸ ಶಿಕ್ಷಣದಿಂದ ಆಧುನಿಕವಾಗಿ ಬದುಕಲು ಬಯಸುವ ಗಂಡ, ಇವರ ದಾಂಪತ್ಯದ ಅಸಾಮರಸ್ಯದಿಂದಾಗಿ ಸುಬ್ಬ, ನೆರೆಯ ಗೆಳೆಯ ವಿಶ್ವನಾಥನ ಸಂಸಾರದೊಂದಿಗಿನ ಗೆಳೆತನಕ್ಕೆಳ ಸುವುದು, ವಿಶ್ವನಾಥನ ವಿಧವೆ ನಾದಿನಿಯನ್ನು ಮದುವೆ ಯಾಗುವುದರವರೆಗಿನ ಭಾಗ ವಿವರವಾಗಿ ದಾಖಲಾಗು ತ್ತದೆ. ನಿಷ್ಕಾರಣವಾಗಿ ತನ್ನನ್ನು ಬಿಟ್ಟ ಗಂಡನನ್ನು ತಿರಸ್ಕರಿಸಿ ತವರು ಸೇರಿದ ಮೊದಲನೆಯ ಹೆಂಡತಿ ಬದುಕಿಡೀ ತನ್ನ ಅಜ್ಞಾನಕ್ಕಾಗಿ ಪಶ್ಚಾತ್ತಾಪ ಪಡುತ್ತಾಳೆ ಕೊನೆಗೊಮ್ಮೆ ಸುಬ್ಬ ಮತ್ತೆ ಕರೆಯಬರುತ್ತಾನೆ. ಪಶ್ಚಾತ್ತಾಪದಿಂದಲ್ಲ, ತನ್ನ ಎರಡನೆಯ ಹೆಂಡತಿ ಕೂಸು ಹಡೆದು ತೀರಿಕೊಂಡದ್ದರಿಂದ ಆ ಕೂಸನ್ನು ನೋಡಿ ಕೊಳ್ಳಲು ಒಬ್ಬರು ಬೇಕು, ಎಂಬುದಕ್ಕಾಗಿ. ಕೇಳಿದ ಕೂಡಲೇ ಅವಳ ಮನಸ್ಸು ಕಲ್ಲಾಗುತ್ತದೆ. ಮಗುವನ್ನು ಬೇಕಿದ್ದರೆ ತನ್ನಲ್ಲಿಗೆ ಕಳಿಸಿದರೆ ಸಾಕಿ ದೊಡ್ಡದು ಮಾಡಿ ಕಳಿಸುವುದಾಗಿ ವ್ಯಂಗ್ಯವಾಗಿ ನುಡಿದು ಆಕೆ ಗಂಡನ ಆಹ್ವಾನವನ್ನು ತಿರಸ್ಕರಿಸುತ್ತಾಳೆ.

ಇದೇ ಬಗೆಯ ವಸ್ತು ಸ್ವಲ್ಪ ವಿಭಿನ್ನ ರೀತಿಯಲ್ಲಿ 'ಮೇನಕೆ' ಕಥೆಯಲ್ಲಿ ಪುನರಾವರ್ತಿಸುತ್ತದೆ. ಸುಂದರಳಾದ ಪತಿಯನ್ನು ನಿಷ್ಕಾರಣವಾಗಿ ತೊರೆದು ವಿದೇಶದಲ್ಲಿ ಬೇರೊಂದು ಮದುವೆ ಮಾಡಿಕೊಂಡು ಅಲ್ಲೇ ನೆಲೆಸಿದ್ದ ಗಂಡ, ಇಪ್ಪತ್ತು ವರ್ಷಗಳ ನಂತರ ಸ್ವದೇಶಕ್ಕೆ ಮರಳಿ, ತನ್ನ ಮೊದಲ ಹೆಂಡತಿಯನ್ನು ಕ್ಷಮೆಯಾಚಿಸಿ ಕರೆಯಲು ಬರುತ್ತಾನೆ. ಆದರೆ ಮೇನಕೆ ತಂದೆ-ತಾಯಿಗಳ ಮರಣದ ಬಳಿಕ ತಾನೇ ಅವರ ಆಸ್ತಿಯ ಒಡೆಯಳಾಗಿ ಸಮಾಜದಲ್ಲಿ ಆಡಂಬರಯುಕ್ತವಾಗಿ ಸ್ವಚ್ಛಂದವಾಗಿ ಬದುಕನ್ನು ತಾನೇ ರೂಪಿಸಿಕೊಂಡವಳು. ಆತನೆದುರು ತನ್ನ ಬದುಕು ಹಾಳಾಯಿತೆಂದು ತೋರಿಸಿಕೊಳ್ಳದಷ್ಟು ಸ್ವಾಭಿಮಾನಿ. ಸಮಾಜದ ಯಾವ ಟೀಕೆಗಳನ್ನು ಲಕ್ಷಿಸದಷ್ಟು ದಿಟ್ಟೆ. ಆದ್ದರಿಂದಲೇ ಸೋಮಸುಂದರ ಹಿಂದಿನದನ್ನೆಲ್ಲ ಮರೆತು ದಯವಿಟ್ಟು ಮತ್ತೆ ಬರಬೇಕೆಂದು ಹೇಳುತ್ತಿರುವಾಗಲೇ ಅವನ ಮಾತನ್ನು ತುಂಡರಿಸಿ, ಏನಾದರೂ ಇದ್ದರೆ ತಾನೇ ಮರೆಯಲಿಕ್ಕೆ ಪ್ರೀತಿಯೇ, ಪತ್ರವೇ ಯಾವ ಸಂಬಂಧ ತಮ್ಮಲ್ಲಿ ಇತ್ತೆಂದು ಈಗದನ್ನು ಮತ್ತೆ ಜೋಡಿಸಲಿಕ್ಕೆ ಯತ್ನಿಸಬೇಕೆಂದು ಮುಖಕ್ಕೆ ರಾಚಿದಂತೆ ಹೇಳಿ ಅವನನ್ನು ಹೊರಗಟ್ಟುತ್ತಾಳೆ.

ಈ ಎರಡೂ ಕತೆಗಳಲ್ಲಿ ಹಾಗೂ ಹಿಂದೆ ಉಲ್ಲೇಖಿಸಿದ ಕತೆಗಳಲ್ಲಿ ಕೂಡ ಸಾವಿತ್ರಮ್ಮ ವೈವಾಹಿಕ ಬದುಕಿನಲ್ಲಿ ತನ್ನ ಅವಹೇಳನ, ಅವಮಾನಗಳನ್ನು ಸಹಿಸಲಾರದ ಹೆಣ್ಣುಗಳನ್ನು, ಅವರ ಸ್ವಾಭಿಮಾನವನ್ನು ಉಳಿದೆಲ್ಲಕ್ಕಿಂತ ಮಿಗಿಲಾಗಿ ಸಮಾನವಾಗಿ ಪ್ರೇಮದಿಂದ ಕಾಣಬೇಕೆಂಬ ಆದರ ತೀವ್ರ ಆಕಾಂಕ್ಷೆಯನ್ನು ಬಲವಾಗಿ ಚಿತ್ರಿಸುತ್ತಾರೆ. ಈ ಹೆಣ್ಣುಗಳು ವೀಣಾಶಾಂತೇಶ್ವರರು ಒಂದೆಡೆಯಲ್ಲಿ ಒಟ್ಟಾಗಿ ಮಹಿಳಾಸಾಹಿತ್ಯ ಕುರಿತು ಹೇಳುವ ಮಾತುಗಳಿಗೆ ಅಪವಾದಗಳಾಗಿಯೇ ತೋರುತ್ತಾರೆ. ಕರ್ನಾಟಕ ಸಾಹಿತ್ಯ ಅಕಾಡೆಮಿಯವರ ಪ್ರಕಟಣೆಯಾದ 'ಕನ್ನಡ ಸಾಹಿತ್ಯ ಸಂದರ್ಭ' ಕೃತಿಯಲ್ಲಿನ ವೀಣಾ ಅವರ ಲೇಖನ ವೊಂದರಲ್ಲಿ ಈ ಅಭಿಪ್ರಾಯಗಳು ಮಂಡಿಸಲ್ಪಟ್ಟವೆ. "ಕನ್ನಡದ ಮಹಿಳಾ ಸಾಹಿತ್ಯದಲ್ಲಿ ಪರಂಪರೆಯಿಂದ ಮಹಿಳೆ ಅನುಭವಿಸಿದ ದೌರ್ಜನ್ಯ, ಅವಹೇಳನ, ಶೋಷಣೆ ಇತ್ಯಾದಿಗಳ ಬಗ್ಗೆ ನಿಜವಾದ ಕಳಕಳಿ ವ್ಯಕ್ತಮಾಡುವಂತಹ ಕೃತಿಗಳು ತೀರಾಕಡಿಮೆ. ನಮ್ಮ ಬಹಳಷ್ಟು ಲೇಖಕಿ ಯರು ಪರಂಪರಾಪ್ರಿಯರು. ಪರಂಪರಾಗತ ಮೌಲ್ಯ ಗಳಾದ ಪತಿವ್ರತಾಧರ್ಮ, ತ್ಯಾಗ, ನಿಷ್ಠೆ, ಸಹನೆ ಇವು ಗಳನ್ನು ವೈಭವೀಕರಿಸುವ ಕೃತಿಗಳನ್ನೇ ಅವರು ತೀರಾ

ಇತ್ತೀಚಿನವರೆಗೆ ರಚಿಸಿದರು. ಪರಂಪರೆಯಲ್ಲಿ ಹುದುಗಿದ ಮೌಢ್ಯ, ಅಂಧನಿಷ್ಠೆ ಹಾಗೂ ಪುರುಷನ ಪ್ರಾಬಲ್ಯವನ್ನು ಪ್ರಾಮಾಣಿಕವಾಗಿ ವಿರೋಧಿಸುವ ಪ್ರಯತ್ನವನ್ನು ನಾವು ಮರಾಠಿ ಸಾಹಿತ್ಯದಲ್ಲಿ ಕಾಣುವಹಾಗೆ ಕನ್ನಡ ಮಹಿಳಾ ಸಾಹಿತ್ಯದಲ್ಲಿ ಕಾಣಲಾಗುತ್ತಿಲ್ಲ."

ಈ ಮಾತುಗಳು ಈಗಾಗಲೇ ನಾನು ಹೆಸರು ಹೇಳಿದ ಯಾವ ಲೇಖಕಿಗೂ ಅನ್ವಯಿಸಲಾರವು ಎಂದಾಗ ಸಾಕಷ್ಟು ಲೇಖಕಿಯರು ಈ ಎಲ್ಲ ಪರಂಪರೆಗೆ ಎದುರಾಗಿಯೇ ತಮ್ಮ ಅಭಿವ್ಯಕ್ತಿಗೆ ಯತ್ನಿಸಿರುವುದು ಹಗಲಿನಷ್ಟು ಸ್ಪಷ್ಟ ವಿದೆ. ಹಾಗಿರುವಾಗ ಯಾರನ್ನು ಕುರಿತು ವೀಣಾ ಈ ಮಾತು ಹೇಳುತ್ತಿದ್ದಾರೆ ? ಅಥವಾ ನಿಜವಾಗಿ ತಮ್ಮ ಪರಂಪರೆಯಲ್ಲಿ ಏನು ಸಂಬಂಧವಿರಿಸಿದೆ ಎಂಬುದನ್ನು ಕಾಣುವಲ್ಲಿ ಇವರು ಸೋಲುತ್ತಿದ್ದಾರೆಯೇ ಎಂಬ ಪ್ರಶ್ನೆಯೇಳುತ್ತದೆ. ವಾಣಿಜ್ಯಕ್ಕಾಗಿ ಬರೆದವರ ಬರಹ ಗಳನ್ನೇ ಆಧಾರವಾಗಿಟ್ಟುಕೊಂಡು ಸಾಹಿತ್ಯದಲ್ಲಿ ಗಂಭೀರ ವಾಗಿ ಶ್ರಮಿಸುವವರನ್ನು ನಿರ್ಲಕ್ಷಿಸುವಂತಹ ಮಾತುಗಳು ವಿಮರ್ಶೆಯ ವಸ್ತುನಿಷ್ಠತೆಯ ದ್ಯೋತಕವಿರಬಹುದೇ ?

ಈ ಪ್ರಶ್ನೆಗಳನ್ನು ನಾನು ಕೇಳಿದ್ದರ ಕಾರಣವಿಷ್ಟೆ. ಅರವತ್ತರ ದಶಕದ ನಂತರ ಸ್ವತಃ ವೀಣಾ ಅವರ ಕತೆ ಯೊಂದು ಮೇಲೆ ಪ್ರಸ್ತಾಪಿಸಿದ ಗಂಡನಿಂದ ಪರಿತ್ಯಕ್ತ ಳಾದ ಹೆಣ್ಣಿನ ಸಮಸ್ಯೆಯನ್ನು ವಸ್ತುವಾಗಿ ಹೊಂದಿದೆ. ('ನಿರ್ಧಾರ') ಗಂಡಸಿನ ಸ್ವಾರ್ಥ, ಸ್ವಹಿತಾಸಕ್ತ, ದ್ವಿಸ್ತರ ನ್ಯಾಯಗಳನ್ನು ವಿಡಂಬಿಸಿ ಅನ್ಯಾಯಕ್ಕೊಳಗಾದ ಸ್ತ್ರೀಯ ಆ ಸ್ಥಿತಿಯ ಅರಿವಿನ ಮೂಲಕವೇ ಅವಳ ಕೊನೆ ನಿರ್ಧಾರ ಪ್ರಕಟವಾಗುವಂತೆ ವೀಣಾರ ಕತೆಯಿದೆ. ಅಂದರೆ ಆ ವೈಚಾರಿಕ ನಿಲುವು ಆಕಸ್ಮಿಕವಾಗಿ, ಹೊರಗಿನಿಂದ ಹೇರಲ್ಪಡದೆ, ಇಡೀ ಕತೆಯ ನಿರೂಪಣೆಯ ಒಳಗಿನಿಂದಲೇ ಮೂಡಿಬರುತ್ತದೆ. ನವ್ಯ ಶೈಲಿಯು ದೊರಕಿಸಿಕೊಟ್ಟ ಈ ಅಭಿವ್ಯಕ್ತಿ ವಿಧಾನವನ್ನು ಸಮರ್ಪಕವಾಗಿ ವೀಣಾ ಬಳಸಿಕೊಳ್ಳುತ್ತಾರೆ. ಇಂಥ ಕಥನತಂತ್ರ ಸಾವಿತ್ರಮ್ಮ ನವರಲ್ಲಿ ಇಲ್ಲವಾದರೂ ವ್ಯವಸ್ಥೆಯ ಬಗ್ಗೆ ಒಮ್ಮುಖ ವಾದ ಸರಿ ತಪ್ಪುಗಳನ್ನು ಹೇಳುವುದಕ್ಕಿಂತಲೂ ಅವರು ಸಮಗ್ರ ದೃಷ್ಟಿಯಿಂದ ಪರಿಸ್ಥಿತಿಯನ್ನು ವಿಶ್ಲೇಸುವಂತೆನಿ ಸುತ್ತದೆ. ಅಂದರೆ ಎಲ್ಲ ದಿಕ್ಕಿನಿಂದ ವಾಸ್ತವವನ್ನು ಸೆರೆ ಹಿಡಿಯಲು ಯತ್ನಿಸುತ್ತಾರೆ. ಆದ್ದರಿಂದಲೇ 'ನಿರಾಶ್ರಿತೆ' ಯಲ್ಲಿ ತುಳಸಿಯಷ್ಟೇ ಚಂದ್ರನ ತಳಮಳಗಳಿಗ ಆಸ್ಪದವಿದೆ. 'ದಮಯಂತಿ'ಯ ಸಂಕಟಗಳಂತೆಯೇ ಭಾಸ್ಕರನ ಚಿಂತೆಗೂ ಸ್ಥಾನವಿದೆ. 'ಪಶ್ಚಾತ್ತಾಪ'ದಲ್ಲಿ ಶಾರದೆಯ-ಸುಬ್ಬುವಿನ ಸ್ವಭಾವಗಳ ನಡುವಿನ ವಿರೋಧ, ಸುಬ್ಬು-ಸರಸಿಯ ತಂಗಿಯೊಂದಿಗೆ ಸಹಜವಾಗಿ ಅರಳುವ ಸ್ನೇಹ-ಇವೆಲ್ಲವೂ ಮುಖ್ಯವೇ ಆಗುತ್ತವೆ. ಅಂದರೆ ಸ್ತ್ರೀ ಮಾತ್ರ ಈ ಪರಂಪರಾಗತ ಮೌಲ್ಯಗಳಿಂದ ಶೋ ಷಿ ತ ಳಾ ದ ಳು ಎನ್ನುವುದಕ್ಕಿಂತ ಇಡೀ ಸ್ತ್ರೀ-ಪುರುಷರ ಸಮುದಾಯವೇ ಹೀಗೆ ಹಳೆಯ ಕೋಟೆಯಲ್ಲಿ ಬಂಧಿತವಾಗಿದೆ. ಅದ ರೊಳಗೆ ಪುರುಷ ತನ್ನ ಹೆಮ್ಮೆ, ಪ್ರತಿಷ್ಠೆ, ಸ್ವಾರ್ಥಗಳನ್ನು ಹೆಂಗಸಿನ ಮೇಲೆ ಚಲಾಯಿಸುತ್ತಾನೆಂಬುದನ್ನು ಸೂಕ್ಷ್ಮ ವಾದ ಧ್ವನಿಗಳಲ್ಲಿ ಅವರು ಸೂಚಿಸುತ್ತಾರೆ. 'ಮೇನಕೆ' ಕತೆಯಲ್ಲಿ ಮಗಳನ್ನು ಅವಳ ಗಂಡ ಬಿಟ್ಟು ಬೇರೆ ಮದುವೆ ಯಾದನೆಂದು ತಿಳಿದಾಗ, ಅವಳ ತಂದೆ ಒಣಜಂಬದಿಂದ "ಅವಳು ಗಂಡುಮಗನಿದ್ದಂತೆ" "ಕೋರ್ಟಿನಲ್ಲಿ ದಾವೆ ಹೂಡುತ್ತೇನೆ" "ಬೇರೆ ಮದುವೆ ಮಾಡುತ್ತೇನೆ" ಎಂದು ಬಡಾಯಿಕೊಚ್ಚಿದರೂ ಅಳಿಯನಿಗೆ ಒಂದು ಪತ್ರ ಹಾಕಿ ವಿಚಾರಿಸುವುದು ತನ್ನ ಸ್ವಾಭಿಮಾನಕ್ಕೆ ಕುಂದೆಂದು ನಂಬು ವವನು, ಕಾರ್ಯತಃ ಏನೂ ಮಾಡದೆ ಹೋದವನು. ಮೇನಕೆ ಸ್ವತಂತ್ರವಾಗಿ ವರ್ತಿಸುವಂತೆ ಆಗಿದ್ದರೆ ಅದರಲ್ಲಿ ಅವನದೂ ಪಾಲಿದೆ. ಆದರೆ ಓದಿ ವಿದ್ಯಾವಂತಳಾದ ಮೇನಕೆ, ವಿಚ್ಛೇದನೆಗಾಗಲಿ ಬೇರೆ ಮದುವೆಗಾಗಲಿ ಯತ್ನಿಸದೆ, ಸುಲಭವಾಗಿ ದೊರೆವ ಪುರುಷರ ಗೆಳೆತನಕ್ಕೆ ತನ್ನನ್ನು ತೆತ್ತುಕೊಳ್ಳುವುದು ಒಂದು ವಿಧದಲ್ಲಿ ತನಗೆ ಅನ್ಯಾಯವೆಸಗಿದ ಸಮಾಜದ ವಿರುದ್ಧ ತೋರುವ ಪ್ರತೀ ಕಾರ ಭಾವನೆ ಎನಿಸುವಂತಿದೆ. ಆದರೆ ಆಕೆಯ ವರ್ತನೆ ಸಮಾಜದ ಜನರಿಗೆ, ಅವಳ ರೂಪ, ಹಣಕ್ಕೆ ಕರುಬುವ ಬಂಧುಗಳಿಗೆ ಸ್ವೇಚ್ಛೆಯಾಗಿ ಕಂಡರೂ ಅಂತರಿಕವಾಗಿ ಪ್ರೀತಿ, ಸ್ನೇಹಗಳ ಹಂಬಲ, ಏಕಾಕಿತನಗಳಿಂದಾಗಿ ಅವಳು ತನ್ನನ್ನು ನಿಜವಾಗಿ ಮೆಚ್ಚುವವರನ್ನು ಸ್ನೇಹದಿಂದ ಆದರಿಸುವವಳು ಎಂಬುದನ್ನು ಲೇಖಕಿ ಸೂಚಿಸುತ್ತಾರೆ.

ಸಾವಿತ್ರಮ್ಮ ಬದುಕನ್ನು ನಿರೀಕ್ಷಿಸುವ ಕ್ರಮದಲ್ಲಿ ಹೀಗೆ ಕಪ್ಪು ಬಿಳುಪಿನ ವಿಂಗಡಣೆಯ ಬದಲಾಗಿ ಹಲವು ದಿಕ್ಕಿನಿಂದ ವಾಸ್ತವವನ್ನು ಗ್ರಹಿಸುವಯತ್ನ ಪ್ರಧಾನವಾಗಿ ತೋರುತ್ತದೆ. ಒಟ್ಟಾರೆಯಾಗಿ ಮಾನವ ಹೃದಯದ ಸಂಪನ್ನತೆಯತ್ತ ಮುಖಮಾಡುವ ಅವರ ಕತೆಗಳು,

ಆ ಸಂಪನ್ನತೆಯ ವಿಕಾಸಕ್ಕೆ ಆಸ್ಪದ ದೊರೆಯದಿರುವ ಚೇತನಗಳ ಬಗ್ಗೆ, ಪೂರ್ಣ ಅನುಕಂಪೆ ಸಹಾನುಭೂತಿಗಳನ್ನು ಪ್ರಕಟಿಸುವ ರೀತಿಯು ಮಾಸ್ತಿಯವರ ಕೃತಿಗಳಲ್ಲಿ ಕಾಣುವ ರೀತಿಯದೇ ಆಗಿದೆ. ಬಹುಹಿಂದೆಯೇ ಸಾವಿತ್ರಮ್ಮನವರ "ಪಾತುಕತೆ"ಯನ್ನು ಮಾಸ್ತಿಯವರ "ಸುಬ್ಬಣ್ಣ" ಕತೆಗೆ ಹೋಲಿಸಲಾಗಿದೆ. ಡಿ.ವಿ.ಜಿ. ಯಂತಹವರು ಇವರ ಕಥೆಗಳ ಭಾಷೆ, ಶೈಲಿಗಳ ಮಾಧುರ್ಯ, ಸುಸಂಸ್ಕೃತವಾದ ಬದುಕಿನ ಗ್ರಹಿಕೆಗಳನ್ನು ಗ್ರಹಿಸಿ ಪ್ರಶಂಸಿಸಿದ್ದಾರೆ. ಆದರೂ ಇಂದು ಸಾವಿತ್ರಮ್ಮನವರ ಕತೆಗಳೆಂದರೆ ನವ ಪೀಳಿಗೆಯವರಿಗೆ ಮಾಸ್ತಿಗಳ ಕತೆಗಳ ಹಾಗೆ ಪರಿಚಿತವಲ್ಲ. ಇದರ ಹಿಂದೆ ಇರುವ ಸಾಮಾಜಿಕ ರಾಜಕೀಯ ಕಾರಣಗಳನ್ನು ಪರಿಭಾವಿಸಿದಾಗ ಏಕೆ ಸ್ತ್ರೀ ಪರ ದೃಷ್ಟಿಕೋನ ಹಿಂದೆಂದಿಗಿಂತ ಇಂದು ಅವಶ್ಯಕ ಎನ್ನುವುದು ಗೋಚರಿಸಬಹುದು. ತಮ್ಮ ಜೊತೆಯವರಿಗಿಂತ ಭಿನ್ನವಾದ ರೀತಿಯಲ್ಲಿ ಕಾಲಕಾಲಕ್ಕೆ ಇವರು ಹೊಸಬಗೆಯ ಸ್ತ್ರೀ ವ್ಯಕ್ತಿತ್ವದ ಸಾಧ್ಯತೆಗಳನ್ನು ತೋರಿಸುತ್ತಾ ಬಂದಿದ್ದು, ಕನ್ನಡ ಕಥಾಸಾಹಿತ್ಯಕ್ಕೆ ಇವರಿಂದ ಸಂದಿರುವ 'ಸ್ತ್ರೀಯಾತ್ಮಕ ಕಾಣಿಕೆ'ಯಾಗಿದೆ ಎನ್ನುವುದು ನಿರ್ವಿವಾದ. ಸಾವಿತ್ರಮ್ಮನವರೊಳಗಿನ ಬಂಡುಗಾರ ಸ್ತ್ರೀ ಗುಣ ಅವರ ಎಲ್ಲಾ ಕತೆಗಳಲ್ಲೂ ಸಮರ್ಪಕವಾಗಿಯೇ ವ್ಯಕ್ತವಾಗಿದೆಯೆಂದು ಅರ್ಥವಲ್ಲ

'ಮಾಯದ ನೆನಪು' 'ಸ್ಮರಣೆ' 'ಸರ್ಪಮತ್ಸರ' ಮುಂತಾದ ಹಲವು ಕತೆಗಳು ಖಚಿತವಾದ ಸ್ತ್ರೀ ಪರವಾದ ನಿಲುವನ್ನೋ ವೈಚಾರಿಕತೆಯನ್ನೋ ತೋರಿಸುತ್ತವೆಂದು ಹೇಳಲಾಗುವುದಿಲ್ಲ, ಆದರೆ ಮುಂದಿನ ನವ್ಯ ಮತ್ತು ಬಂಡಾಯದ ನಂತರದ ಕಥಾ ಲೇಖಕಿಯರು ವಿಶೇಷವಾಗಿ ಚರ್ಚೆಗೆ ಗುರಿ ಮಾಡಿದ, ಮಾಡುತ್ತಿರುವ ಸ್ತ್ರೀ-ಪುರುಷ ಸಂಬಂಧಗಳ ಸೂಕ್ಷ್ಮ ವಿಶ್ಲೇಷಣೆಗಳನ್ನು ಸಾವಿತ್ರಮ್ಮ ಸ್ವಲ್ಪ ಮೊದಲೇ ಆರಂಭ ಮಾಡಿರುವುದನ್ನು ನಿರ್ಲಕ್ಷಿಸಲು ಸಾಧ್ಯವಿಲ್ಲ. ರಾಜಲಕ್ಷ್ಮಿಯಂಥವರು ಸ್ತ್ರೀ ಸಂವೇದನೆಯ ನೆಲೆಯಿಂದಲೇ ಸತ್ಯವರಸುವ ಯತ್ನಕ್ಕೆ ತೊಡಗುವ ಕಲೆಗಾರಿಕೆ ತೋರಿದರು. ವೀಣಾಶಾಂತೇಶ್ವರ ಅವರು ವೈವಾಹಿಕ ಬಂಧನದ ಅನಿವಾರ್ಯತೆ, ತಾಯ್ತನದ ಹಕ್ಕು, ಲೈಂಗಿಕತೆಗಳನ್ನು, ಪುರುಷ ನಿರ್ಮಿತ ಸಮಾಜದ ಏಕಪಕ್ಷೀಯ ಧೋರಣೆಗಳನ್ನು, ಸ್ತ್ರೀ ಅನುಭವದ ನೆಲೆಯಿಂದ ತರ್ಕ, ಬುದ್ಧಿ ಪ್ರಧಾನವಾದ ರೀತಿಯಲ್ಲಿ ಪ್ರಶ್ನಿಸಿದ್ದಾರೆ, ಸರಿಸುಮಾರು ಇದೇ ಅವಧಿಯಲ್ಲಿ ಪ್ರಕಟವಾಗಿರುವ 'ಅವಳದೊಂದು ಕಥೆ' 'ಮರು ಮದುವೆ' 'ಹೊಣೆ ಯಾರು' 'ಸುಪ್ತ ಬಯಕೆ' 'ಸರಿದ ಬೆರಳು' 'ಒಂದು ಪ್ರಕರಣ' 'ಮಣ್ಣಿನ ಕರೆ' 'ಹಳೆಯ ಜೋಡು' 'ಬಿಸಿಲು ಗುದುರೆ' ಮತ್ತು ಇತ್ತೀಚಿನ 'ಕಿಂ ನಮೋ ಹೃತಮ್' ಮುಂತಾದ ಕತೆಗಳೆಲ್ಲದರ ವಸ್ತು, ಸಂದರ್ಭ ಬೇರೆ ಬೇರೆಯಾಗಿರುವಂತೆ ತೋರಿದರೂ ಈ ಎಲ್ಲ ಕತೆಗಳಲ್ಲಿ ಸ್ತ್ರೀ ಪುರುಷರ ಸಂಬಂಧಗಳ ಸತ್ಯವನ್ನು ಶೋಧಿಸುವ ಜಿಜ್ಞಾಸೆಯೊಂದು ಒಳಗಿನ ಎಳೆಯಾಗಿ ತೋರುತ್ತದೆ.

'ಮರುಮದುವೆ'ಕಥೆಯಲ್ಲಿ ಮಧ್ಯವಯಸ್ಸಿನ ಶ್ರೀಮಂತ ವಿದುರ ಮಗಳ ವಯಸ್ಸಿನ ಹುಡುಗಿಯನ್ನು ಮದುವೆಯಾದ ಕಥಾವಸ್ತು ಹಳೆಯದಾದರೂ ಅದು ಎತ್ತುವ ಪ್ರಶ್ನೆ ಹಳೆಯದಲ್ಲ. ಆದ್ದರಿಂದಲೇ ಮತ್ತೆ 'ಕಿಂ ನಮೋ ಹೃತಮ್' ಕಥೆಯಲ್ಲಿ ಗಂಡಿನ ಚಪಲತೆಯಾಗಿ. ಸ್ತ್ರೀ ಪುರುಷರಿಬ್ಬರ ಪ್ರೀತಿಯು ಅವಶ್ಯಕತೆಯ ಅಂಗವಾಗಿ ಅದೇ ವಸ್ತು ಮತ್ತೆ ಮತ್ತೆ ಕಾಣದೊರೆಯುತ್ತದೆ. ತನ್ನ ಜೀವದಂತಿದ್ದ ಪತ್ನಿ ಮರಣಿಸಿದಾಗ ಇಂದುಮತಿಗಾಗಿ ವಿಲಪಿಸುವ ಅಜನಂತೆ ತನ್ನನ್ನು ಭಾವಿಸಿಕೊಂಡ ವೃದ್ಧ ಪತಿ, ತನ್ನ ಅಸಹಾಯಕ ಸ್ಥಿತಿಗೆ ಬೇರೊಬ್ಬ ಹೆಣ್ಣಿನ ವಾತ್ಸಲ್ಯ ದೊರೆತಾಗ ಆಕೆಯನ್ನು ಮದುವೆಯಾಗುತ್ತಾನೆ 'ಅವಳದೊಂದು ಕಥೆ' ಬಡಕ್ಷಯ ರೋಗಿಗೆ ಮೋಸದಿಂದ ಮದುವೆ ಮಾಡಲ್ಪಟ್ಟ ಯುವತಿ, ಪತಿಯ ಮರಣಾನಂತರ ಭಾವನ ಅಧೀನಳಾಗಿ ತನ್ನ ಸುಖವನ್ನು ಕಂಡುಕೊಂಡರೂ ಆತನೂ ಮರಣಿಸಿದಾಗ ಅವನ ಹೆಂಡತಿಯಿಂದ ನಿರ್ಗತಿಕರ ದೆಸೆಗೆ ದೂಡಲ್ಪಟ್ಟು ಹುಚ್ಚಿಯಾದ ದುರಂತವನ್ನು ಚಿತ್ರಿಸುತ್ತವೆ. 'ಯಾರು ಹೊಣೆ' ಗಂಡು ದೊರೆಯಲಿಲ್ಲವೆಂದು ಮಗಳನ್ನು ಒಬ್ಬ ಹುಟ್ಟು ಪೆದ್ದನಿಗೆ ಕಟ್ಟಿದ ತಂದೆ, ಅವನಕ್ಷಿಪಾಶವೀ ಕೋಪಕ್ಕೆ ಮಗಳು ಬಲಿಯಾದಾಗ ದುಃಖಿಸುವ ತಂದೆ, ಆ ಹುಡುಗಿಯನ್ನು ರೂಪವಿಲ್ಲವೆಂದು ಮದುವೆಯಾಗಲು ನಿರಾಕರಿಸಿದ್ದ ಯುವಕನ ಪಶ್ಚಾತ್ತಾಪಗಳನ್ನು ಚಿತ್ರಿಸುತ್ತದೆ. ಬಾಲ್ಯದ ಗೆಳತಿಯನ್ನೇ ಕೈಹಿಡಿಯಲು ಬದುಕಿನಲ್ಲಿ ಹಲವು ಬಾರಿ ಯತ್ನಿಸಿದ ಯುವಕ ಎಲ್ಲ ಸಲವೂ ಆ ಅವಕಾಶದಿಂದ ವಂಚಿತನಾಗುವ ಕಥೆ "ಸರಿದ ಬೆರಳು"ವಿನಲ್ಲಿದೆ. ಮದುವೆ

ಯಾಗಿ ಪ್ರೀತಿಯ ಪತಿ, ಮಗುವಿದ್ದೂ, ಬಾಲ್ಯದ ಗೆಳೆಯನ ವ್ಯಕ್ತಿತ್ವದಿಂದ ಸೆಳೆಯಲ್ಪಟ್ಟ ಯುವತಿಯ ಹಂಬಲ, ಹತಾಶೆಗಳನ್ನು ಚಿತ್ರಿಸುತ್ತದೆ, 'ಬಿಸಿಲು ಗುದುರೆ'.

ಪರಸ್ಪರ ಅನಾಸಕ್ತಿಯಿಂದ ದಾಂಪತ್ಯ ಜಡ್ಡುಗಟ್ಟಿದಾಗ ಬೇರೆ ಬೇರೆ ಸ್ತ್ರೀ ಪುರುಷರ ಆಕರ್ಷಣೆಗೆ ಒಳಗಾಗಿ ಮೊದಲ ಮದುವೆಯನ್ನು ಮುರಿದು ಹೊಸಬದುಕು ಪ್ರಾರಂಭಿಸಲು ಬಯಸಿದ್ದ ದಂಪತಿಗಳು ಗಂಡನ ಅಪಘಾತ ದಿಂದಾಗಿ ಮತ್ತೆ ಒಂದಾಗಿ ಯಥಾಸ್ಥಿತಿಗೆ ಮರುಳುವ ಕಥೆ "ಹಳೆಯ ಜೋಡು". ವಿವಾಹ ಬಂಧನದ ಹೊರಗೇ ತನ್ನ ತಾಯ್ತನವನ್ನು ಸಹಜವಾಗಿ ಸ್ವೀಕರಿಸಿದ ಯುವತಿಯ ಕಥೆ "ಸುಪ್ತ ಬಯಕೆ". ಹೀಗೆ ದಾಂಪತ್ಯ ಜೀವನದ ಬಗೆಗಿನ ಪ್ರಚಲಿತ ಕಲ್ಪನೆ, ನಂಬಿಕೆಗಳನ್ನು ಒರೆಹಚ್ಚಿ, ಪರೀಕ್ಷಿಸುವ ಸಾವಿತ್ರಮ್ಮ ಒಟ್ಟಾರೆ ಕೌಟುಂಬಿಕ ವ್ಯವಸ್ಥೆಯ ಒಳಗಿನ ವೈಷಮ್ಯಗಳನ್ನು ಮೊದಲಿನಿಂದಲೂ ತೀವ್ರವಾಗಿ ಶೋಧಿಸುತ್ತಿದ್ದಾರೆ. ಅವರ ಈಚಿನ ಕಾದಂಬರಿಗಳು ಈ ದಿಕ್ಕಿನಲ್ಲಿ ಹೊಸದೊಂದು ಜೀವನ ದರ್ಶನವನ್ನು ಬಹು ಪಕ್ವವಾದ ರೀತಿಯಲ್ಲಿ ವ್ಯಕ್ತಪಡಿಸು ವಂತಿದ್ದರೆ, ಅವರ ಸಣ್ಣ ಕಥೆಗಳು ಈ ದಿಕ್ಕಿನತ್ತ ವಿವಿಧ ರೀತಿಯ ಮೆಟ್ಟಿಲುಗಳಾಗಿವೆಯೆನ್ನಬಹುದು. ಈ ಕತೆ ಗಳಲ್ಲಿ ಅವರು ಪ್ರಾರಂಭಿಸಿದ ಚರ್ಚೆಗಳು ಇಂದಿನ ತಲೆ ಮಾರಿನವರಾದ ಸಾರಾ, ಗಂಗಾ ಪಾದೇಕಲ್, ನೇಮಿ ಚಂದ್ರ, ವೈದೇಹಿಯಂಥ ಲೇಖಕಿಯರಲ್ಲಿ ಹೊಸ ಜಗತ್ತಿನ ಸಾಧನೆ, ಅದರಿಂದ ಹುಟ್ಟಿರುವ ಬಿಕ್ಕಟ್ಟುಗಳೊಂದಿಗೆ ವಿಶ್ಲೇಷಿತವಾಗುತ್ತಿದೆ. ಈ ದೃಷ್ಟಿಯಿಂದ ಸಾವಿತ್ರಮ್ಮ ಮಹಿಳಾ ಕಥಾ ಸಾಹಿತ್ಯದಲ್ಲಿ ಉದ್ದಕ್ಕೂ ಅತ್ಯಂತ ಪ್ರಾಮಾಣಿಕವಾಗಿ ತೊಡಗಿಕೊಂಡು ಆಯಾಕಾಲದ ಗತಿ ಯೊಂದಿಗೆ ತಮ್ಮ ಚಿಂತನೆ, ಅಭಿವ್ಯಕ್ತಿಗಳಲ್ಲಿ ಬೆಳವಣಿಗೆ ಯನ್ನು ಸಾಧಿಸಿಕೊಂಡಿರುವ ಅಪರೂಪದ ಕತೆಗಾರ್ತಿಯ ರಾಗಿದ್ದಾರೆ. ಅವರ ಜೀವನದೃಷ್ಟಿ ಒಂದು ವಿಧವಾದ ಸಮತೋಲನ ಕಾಯ್ದುಕೊಳ್ಳುವ ಜಾಗೃತಿಯುಳ್ಳದ್ದಾ ಗಿರುವುದನ್ನು ಶಕುಂತಲಾ ದುರಗಿಯವರು ಹೀಗೆ ಗುರು ತಿಸಿದ್ದಾರೆ, "ಸ್ತ್ರೀ ಪಾತ್ರ ಚಿತ್ರಣದಲ್ಲಿ ತುಂಬಿದ ಮಾರ್ದವತೆಯನ್ನು, ಆದರ್ಶವನ್ನು ಪುರುಷ ಪಾತ್ರ ಗಳಲ್ಲಿಯೂ ತುಂಬಿದ್ದಾರೆ. (ಇವರ ಬಹುಪಾಲು ಕತೆ ಗಳಲ್ಲಿ ಬಂದಿರುವ ಪುರುಷರು ಸುಸಂಸ್ಕೃತರು; ಹೃದಯ ವೈಶಾಲ್ಯ ಹೊಂದಿದವರು. ತಮ್ಮಿಂದ ತಿಳಿದೋ ತಿಳಿಯ ದೆಯೋ ಯಾರಿಗಾದರೂ ನೋವಾಗಿದ್ದರೆ, ಅದು ತಮ್ಮ ಅರಿವಿಗೆ ಬಂದಾಗ ಪಶ್ಚಾತ್ತಾಪ ಪಡುವುದು, ದುಃಖಿಸು ವುದು ಅವರ ನೆನಪಿನಲ್ಲಿಯೇ ಸುಖದ ಬದುಕನ್ನು ತ್ಯಜಿಸಿ ನಿರಾಡಂಬರ ಜೀವನ ಕೈಗೊಳ್ಳುವುದು. ಇವೆಲ್ಲವನ್ನೂ ಲೇಖಕಿ ಅತ್ಯಂತ ಮಾನವೀಯತೆಯಿಂದ ಕಂಡು ಚಿತ್ರಿಸಿ ದ್ದಾರೆ.) ಸ್ತ್ರೀಯ ಮಾನಸಿಕ ಒಳತೋಟಿಯ ಚಿತ್ರಣ ಕ್ಕಿಂತಲೂ ಒಂದಂಶ ಮಿಗಿಲಾಗಿ ಪುರುಷರ ಒಳ ತೋಟಿಯ ಚಿತ್ರಣವೇ ಬಂದಿರುವುದು ಸಾವಿತ್ರಮ್ಮ ನವರ ಕತೆಗಳ ವೈಶಿಷ್ಟ್ಯವಾಗಿದೆ" ಎನ್ನುತ್ತಾರೆ.

ಆದರೆ ಹೀಗೆ ಸ್ತ್ರೀ ಸಂವೇದನೆಯ ಮುಖಾಂತರ ಪುರುಷರ ಮೃದು ಅಂಶಗಳನ್ನು ಸಾವಿತ್ರಮ್ಮ ಚಿತ್ರಿಸಿ ದ್ದರೂ, ಮನುಷ್ಯನೆಲೆಯಲ್ಲಿ ಸ್ವಾರ್ಥ, ದೌರ್ಬಲ್ಯಗಳಿಂದ ಈ ಪುರುಷರು ಮುಕ್ತರಲ್ಲವೆಂಬುದನ್ನು ಬಹು ನವುರಾದ ವ್ಯಂಗ್ಯದೊಂದಿಗೆ ಹೊರ ತರುತ್ತಾರೆಂಬುದನ್ನು ಗಮನಿಸ ಬೇಕು. ಹಾಗೆಯೇ ಸಾಮಾಜಿಕ ಒತ್ತಡಗಳು ಹೇಗೋ ಹಾಗೆ ವೈಯಕ್ತಿಕ ದೌರ್ಬಲ್ಯವೂ ಸ್ತ್ರೀಯರ ದುರಂತಗಳಿಗೆ ಕಾರಣವಾಗಿರುವುದನ್ನು ಸಹಾನುಭೂತಿಯಿಂದ ನಿರೂ ಪಿಸುವುದೂ ಗಮನಿಸಬೇಕಾದ್ದು. ಈ ದೃಷ್ಟಿ ವೈಶಾಲ್ಯ, ಸಾವಿತ್ರಮ್ಮನವರ ಕಥೆಗಳ ವಿಶೇಷವಾಗಿದ್ದು, ಈವರೆಗೆ ಸ್ತ್ರೀಯರ ಬರವಣಿಗೆಗಳ ಬಗ್ಗೆ ಪ್ರಕಟವಾಗಿರುತ್ತಾ ಬಂದಿ ರುವ ಹಲವು ವಿಧವಾದ ಪೂರ್ವಾಗ್ರಹಪೀಡಿತ ಅಭಿ ಪ್ರಾಯಗಳನ್ನು ಪ್ರಶ್ನೆಗೆ ಗುರಿಮಾಡುವಂತಿದೆ. ಅಷ್ಟೇ ಅಲ್ಲ, ನಮ್ಮ ಒಟ್ಟು ಸಾಹಿತ್ಯದ 'ಪ್ರಧಾನವಾಹಿನಿ'ಯ ಪರಂಪರೆಯು ಸಾವಿತ್ರಮ್ಮನವರಂಥ ಸ್ತ್ರೀಯರ ಬರವಣಿ ಗೆಯ ನಿಜವಾದ ಸತ್ವವನ್ನು ಒಳಗುಮಾಡಿಕೊಂಡು ಪುನಾರಚಿತವಾದ ಅನಿವಾರ್ಯತೆಯನ್ನು ನಮ್ಮೆದುರು ಒಡ್ಡುತ್ತಿರುವಂತೆ ನನಗೆ ತೋರುತ್ತದೆ.



# ಅಗ್ನಿ ಕನ್ಯೆ ದ್ರೌಪದಿ

□ ರಶ್ಮಿ ಗೋಳಿ

"ಅಹಲ್ಯಾ ದ್ರೌಪದಿ ತಾರಾ ಸೀತಾ ಮಂಡೋದರಿ ತಥಾ ಪಂಚ ಕನ್ಯಾ ಸ್ಮರೇ ನಿತ್ಯಂ ಮಹಾಪಾತಕ ವಿನಾಶನಂ" ಎಂಬ ಶ್ಲೋಕ ಕಿವಿಗೆ ಬಿದ್ದಾಗಲೆಲ್ಲಾ ಐವರು ಪತಿಗಳನ್ನು ಹೊಂದಿದ ದ್ರೌಪದಿ ಹೇಗೆ ಪತಿವ್ರತೆಯರ ಸಾಲಿಗೆ ಸೇರುತ್ತಾಳೆ ಎಂಬ ಸಂಶಯ ಯಾವಾಗಲೂ ಕಾಡುವುದಿತ್ತು. ಮಹಾಭಾರತದ ಕತೆಯನ್ನು ಓದುತ್ತಾ ಹೋದ ಹಾಗೆ ಗಂಡರೋ ನೀವ್ ಭಂಡರೊ ಎಂದು ಜರೆಯುತ್ತಾ ಭೂಮಿಪಾಲ ವಂಶದೊಳುದಿಸಲೇತಕೆ ಕೂಳುಗೇಡಿಂಗೊಡಲ ಹೊರೆವಿರಿ ಎಂದು ಪತಿಗಳೈವರನ್ನು ಮೂದಲಿಸುವ ದ್ರೌಪದಿ ಏಕೆ ಸ್ಮರಣೀಯಳೆಂಬ ಪ್ರಶ್ನೆಗೆ ಆಕೆಯ ಜೀವನವೇ ಉತ್ತರವಾಗಿ ತೋರುತ್ತದೆ.

ಮಹಾಭಾರತದ ಕಥಾನಕವನ್ನು ಗಮನಿಸಿದಾಗ ಕೊಡ ತೆಕೊಳ್ಳುವ ವಸ್ತುವಿನಂತೆ ಸ್ತ್ರೀಯರ ಬಳಕೆ ಆದದ್ದು ಕಂಡು ಬರುತ್ತದೆ. ಶೌರ್ಯವಿಹೀನರಾದ ಚಿತ್ರವೀರ್ಯ, ವಿಚಿತ್ರವೀರ್ಯರಿಗಾಗಿ ಭೀಷ್ಮನಿಂದ ತರಲ್ಪಟ್ಟ ಅಂಬೆ, ಅಂಬಿಕೆ, ಅಂಬಾಲಿಕೆಯರು. ಕುರುಡು ರಾಜ ಧೃತರಾಷ್ಟ್ರನಿಗಾಗಿ ತರಲ್ಪಟ್ಟ ಗಾಂಧಾರ ಕನ್ಯೆ, ರೋಗಿಷ್ಟನಾದ ಪಾಂಡುವಿನ ವಧುಗಳಾದ ಕುಂತಿ, ಮಾದ್ರಿಯರು, ಕರ್ಣನು ಗೆದ್ದು ದುರ್ಯೋಧನನ ಕೈಗಿತ್ತ ಭಾನುಮತಿ, ಒಂದೇ ಎರಡೇ ಈ ಎಲ್ಲಾ ಸತಿಯರ ನೆರವಿನಿಂದ ಪ್ರತ್ಯೇಕವಾಗಿ ನಿಲ್ಲುತ್ತಾಳೆ ಪಾಂಚಾಲಿ. ರಾಜಾಧಿರಾಜರು ತುಂಬಿದ ಸಭೆಯಲ್ಲಿ ಹದಿ ಹರಯದ ಕನ್ಯೆ ದಿಟ್ಟಳಾಗಿ "ಆಹಂ ನ ವರಾಮಿ" ಎಂಬುದಾಗಿ ಕರ್ಣನನ್ನು ತಿರಸ್ಕರಿಸಿದ ದ್ರೌಪದಿಯ ಅಸಾಮಾನ್ಯ ಧೈರ್ಯ ಸ್ಥೈರ್ಯಗಳ ಪರಿಚಯ ಮೊದಲ ಬಾರಿಗೆ ಸ್ವಯಂವರ ಮಂಟಪದಲ್ಲಿಯೇ ಆಗುತ್ತದೆ.

ಏಕಪತಿ ಬಹು ಸತಿಯರೆಂಬ ಲೋಕರೂಢಿಯ ಆ ಯುಗದಲ್ಲೂ, ತನ್ನ ಮಕ್ಕಳೈವರ ಒಗ್ಗಟನ್ನು ಉಳಿಸಿ ಬೆಳೆಸಲೋಸುಗ ಕುಂತಿಯು ಇಚ್ಛಿಸಿದಂತೆ ಪಂಚ ಪುರುಷರನ್ನು ಪತಿಗಳನ್ನಾಗಿ ಸ್ವೀಕರಿಸಿ ಸಮಾಜಕ್ಕೆ ಸವಾಲೆಸೆದ ದ್ರುಪದಾದೇವಿಯ ದೈಹಿಕ ಮಾನಸಿಕ ಸಾಮರ್ಥ್ಯಕ್ಕೆ ಎಣೆಯುಂಟೆ? ಐದು ಬೆರಳುಗಳನ್ನು ಒಗ್ಗೂಡಿಸಿದ ಮುಂಗೈಯಂತೆ ಜೀವನದುದ್ದಕ್ಕೂ ಪಾಂಡು ಪುತ್ರರನ್ನು ಬೆಸೆದ ದ್ರೌಪದಿ ಅಪರೂಪದ ಸ್ತ್ರೀ.

'ರಾಜಾ ಪ್ರತ್ಯಕ್ಷ ದೇವತಾ' ಎನ್ನುವ ರೂಢಿಯಿದ್ದ ಆ ಕಾಲದಲ್ಲಿ ಅಣ್ಣನಿಗೆ ತಮ್ಮಂದಿರ ಮೇಲೆ ಪತಿಗೆ ಪತ್ನಿಯರ ಮೇಲೆ ರಾಜನಿಗೆ ಪ್ರಜೆಗಳ ಮೇಲಿರುವ ಅಧಿಕಾರ ಮೊದಲಿನಿಂದ ಕೊನೆಯವರೆಗೂ ಕಂಡುಬರುತ್ತದೆ. ಗಂಡನ ಹೆಂಡತಿಯಾಗಲ್ಲದೆ, ಪುತ್ರನ ಮಾತೆಯಾಗಲ್ಲದೆ ಸ್ವಂತ ಅಸ್ತಿತ್ವವನ್ನೇ ಹೆಣ್ಣೊಬ್ಬಳು ಹೊಂದಲು ಸಾಧ್ಯವೇ ಇಲ್ಲದ ಆ ಕಾಲದಲ್ಲಿ ಜೂಜಿನ ಪ್ರಸಂಗದಲ್ಲೂ ದ್ರೌಪದಿ ತನ್ನ ಅಭಿಮಾನವನ್ನು ತೊರೆದವಳಲ್ಲ. ಭೀಷ್ಮ, ದ್ರೋಣ, ಕೃಪರಂತಹ ಮಹಾವೀರರು ಅನ್ಯಾಯವನ್ನು ನೋಡುತ್ತಾ ಮೌನದಿಂದಿರುವಾಗ, ರಾಜನಾದ ಧೃತರಾಷ್ಟ್ರನೂ ಮಕ್ಕಳಿಗೆ ಪ್ರೋತ್ಸಾಹವೀಯುತ್ತಿದ್ದಾಗ ಮೂರು ಲೋಕದ ವೀರರಾದ ಭೀಮಾರ್ಜುನರು ಹಿರಿಯರ ಮೌನವನ್ನು ಅರ್ಥೈಸಿಕೊಂಡು ದಾರದೆಳೆಯಿಂದ ಕಟ್ಟಲ್ಪಟ್ಟ ಸಿಂಹಗಳಂತೆ ಮೈ ಒದರದೇ ಸುಮ್ಮನಿದ್ದಾಗ ಅಬಲಳಾದ ದ್ರೌಪದಿ ಸಿಡಿದೇಳುತ್ತಾಳೆ. ಇದು ಸಭೆಯಲ್ಲಿ ಮೂರ್ಖರ ಸಮೂಹವೆಂದು ಮೂದಲಿಸುತ್ತಾಳೆ. ಹರಿಶ್ಚಂದ್ರ ಮಹಾರಾಜನು ಪತ್ನಿಯನ್ನು ಮಾರಿ ತನ್ನ ವ್ರತವನ್ನುಳಿಸಿಕೊಂಡಾಗ ಮೌನದಿಂದ ದಾಸ್ಯವನ್ನು ಅನುಭವಿಸಿದ ತಾರಾಮತಿಯಂತೆ ಸುಮ್ಮನಿರದೆ ಪತ್ನಿಯನ್ನು ಮಾರಿ ಧರ್ಮಸ್ಥಿತಿಯನ್ನು ಉಳಿಸಿಕೊಂಡ ನೀವು ಗಂಡರೋ ಭಂಡರೋ ಎಂಬುದಾಗಿ ಪತಿಗಳನ್ನು ಜರೆಯುವ ದ್ರೌಪದಿಯ ಆಕ್ರೋಶವನ್ನು ಅನುಭವಿಸದವರಾರು?

ಬಾಲ್ಯದಿಂದಲೂ ನ್ಯಾಯಕ್ಕಾಗಿ, ಧರ್ಮಕ್ಕಾಗಿ ಹೋರಾಡಿದ ಕೃಷ್ಣನಿಗೆ ಪಾಂಡವರ ಮಡದಿಯ ಈ ಅನ್ಯಾಯವನ್ನು ಪ್ರತಿಭಟಿಸುವ ಗುಣವೇ ಮೆಚ್ಚುಗೆ

ಯಾಗಿದ್ದಿರಬೇಕು, ಐದು ಪುರುಷ ಸಿಂಹಗಳನ್ನು ಪತಿಗಳನ್ನಾಗಿ ಹೊಂದಿದರೂ ಆತ್ಮಸಖನೆಂದು ಕೃಷ್ಣನನ್ನು ಆರಾಧಿಸಿ, ತುಂಬಿದ ಸಭೆಯಲ್ಲಿ ತನ್ನ ನೆರವಿಗಾಗಿ ಲಕ್ಷ್ಮೀ ರಮಣನೆಂದು ಆರ್ತಳಾಗಿ ಕರೆದ ದ್ರೌಪದಿಯಂತೆ ಕೃಷ್ಣನನ್ನು ಒಲಿಸಿಕೊಂಡವರು ಬೇರುಂಟೆ ?

ಸಹಿಸಲಾರದ ಅಭಿಮಾನ ಭಂಗದಿಂದ ನೊಂದು ಅಗ್ನಿ ಪ್ರವೇಶ ಮಾಡಿದ ಅಂಬೆಯ ಉದಾಹರಣೆಯನ್ನು ಅನುಸರಿಸಿ ದ್ವೇಷಾಗ್ನಿಯಲ್ಲಿ ಹದಿಮೂರು ವರ್ಷಗಳನ್ನು ಕಳೆದ ದ್ರೌಪದಿಯ ಮುಂದೆ ದುರ್ಯೋಧನನೆಂಥಹ ಛಲದಂಕ ಮಲ್ಲ ?

ಹೆಂಡತಿಯ ರಕ್ಷಣೆ ಮಾಡಲಾಗದ ಪತಿಗಳನ್ನು ತ್ಯಜಿಸದೆ ಪತ್ನಿಯನ್ನು ಜೂಜಿನ ಪಣಕ್ಕಿಟ್ಟ ಪುರುಷರ ಹಿಂದೆಯೇ ಅರಣ್ಯಕ್ಕೆ ಹೊರಡುವ ಪತಿಪರಾಯಣೆ ಕೃಷ್ಣೆಯ ಲಕ್ಷ ಸ್ಪಷ್ಟವಾಗಿಯೇ ಇದೆ. ಆ ಲಕ್ಷದೆದುರಿಗೆ ಉಳಿದುದೆಲ್ಲವೂ ಗೌಣ. ಎಳೆಯ ಮಕ್ಕಳನ್ನು ತವರಿಗೆ ಕಳುಹಿಸಿ ಗಂಡರೈವರ ಸಹವರ್ತಿಯಾಗಿ ದೀರ್ಘವಾದ ಆರಣ್ಯವಾಸವನ್ನು ಸಹಿಸಿದ ದ್ರೌಪದಿ ತನ್ನ ಮಕ್ಕಳನ್ನು ಹೆಚ್ಚಾಗಿ ಕಂಡಿದ್ದು ಕನಸಿನಲ್ಲಿಯೇ ಇರಬೇಕು. ನಾರಿಯರ ಸೌಂದರ್ಯದ ಕುರುಹಾದ ನೀಳವೇಣಿಯನ್ನು ಅಲಂಕಾರಕ್ಕೆ ಬಳಸದೆ, ಅವಮಾನದ ಪ್ರತೀಕವಾಗಿಟ್ಟುಕೊಂಡು ವನವಾಸ ದುದ್ದಕ್ಕೂ ಪತಿಗಳಿಗಾದ ಅವಮಾನವನ್ನು ಅವರಿಗೆ ನೆನಪಿಸುತ್ತಾ, ಅವರ ಪೌರುಷವನ್ನು ಉದ್ದೀಪನಗೊಳಿಸುತ್ತಾ ಜೀವ ಸವೆಸಿದಳು.

ಬಿಚ್ಚಿದ ತನ್ನ ಮುಡಿಗಟ್ಟುವಿಕೆ ಹದಿಮೂರು ವರ್ಷಗಳ ನಂತರವೇ ಎಂಬುದನ್ನು ಸರಿಯಾಗಿ ಅರಿತಿದ್ದ ದ್ರೌಪದಿ ತನ್ನ ಗುರಿಸಾಧನೆಗಾಗಿ ವಿರಾಟರಾಜನ ವನಿತೆಯರ ಮುಡಿಯ ಕಟ್ಟುವ ಕೆಲಸಕ್ಕೂ ಹಿಂಜರಿಯದ ಪರಿಯನ್ನು ನೋಡಿದರೆ ತಂದೆಯ ದ್ವೇಷಾಗ್ನಿಯಲ್ಲಿ ಜನಿಸಿದ, ಹದಿಮೂರು ವರ್ಷಗಳ ದೀರ್ಘಾಯುವನ್ನು ದ್ವೇಷಾಗ್ನಿಯಲ್ಲಿಯೇ ಕಳೆದ ಪಾಂಚಾಲಿ ಅಗ್ನಿಕನ್ಯೆ ಎನ್ನುವುದು ನಿಸ್ಸಂಶಯ.

ಇಂದ್ರಪ್ರಸ್ಥದ ರಾಜನಾಗಿ ರಾಜಸೂಯ ಯಾಗವನ್ನು ಮಾಡಿದ ಯುಧಿಷ್ಠಿರನೇ ಯುದ್ಧದ ಪ್ರಸ್ತಾಪ ಮಾಡಲೂ ಹಿಂಜರಿದಾಗ ಮೂರುಲೋಕದ ವೀರನಾದ ಅರ್ಜುನನೇ ಬಿಲ್ಲುಬಾಣಗಳನ್ನು ಕೆಳಗಿಡುವಾಗಲೂ ದ್ರೌಪದಿ ತನ್ನ ಛಲದಲ್ಲಿ ವಿಚಲಿತಳಿಲ್ಲ. ಇಂದ್ರಪ್ರಸ್ಥದ ಅಭಿಷಿಕ್ತ ಮಹಾರಾಣಿಯ ಮಾನಭಂಗವನ್ನು ಸಹಿಸುವ ತನ್ನವರು ಪತಿಗಳಲ್ಲ ಪರಮ ವೈರಿಗಳು ಎಂಬುದಾಗಿ ಕೃಷ್ಣನಲ್ಲಿ ದುಃಖವನ್ನು ತೋಡಿಕೊಳ್ಳುತ್ತಾ ಯುದ್ಧವನ್ನು ಕೋರುವ ದ್ರೌಪದಿ ಅಚ್ಚ ಕ್ಷತ್ರಿಯ ಕನ್ಯೆ. ದುಶ್ಶಾಸನನ ರುದಿರ ಸ್ನಾನವನ್ನು ಮಾಡಲು ಉತ್ಸಾಹದಿಂದ ರಣಭೂಮಿಗೆ ಬಂದು ಭೀಮನಿಂದ ದುಶ್ಶಾಸನನ ರಕ್ತದಲ್ಲಿ ತನ್ನ ಮುಡಿ ಕಟ್ಟಿಸಿಕೊಂಡ ದ್ರೌಪದಿ ರಕ್ತದಾಹದ ಕಾಳಿಯಂತೆ ಕಾಣುತ್ತಾಳೆ.

ಇದರೊಡನೆಯೇ ಆಕೆಯ ಇನ್ನೊಂದು ಮುಖ ಕಂಡು ಬರುತ್ತದೆ. ಹದಿಮೂರು ವರ್ಷಗಳ ನಂತರ ತಂದೆ ತಾಯಿಯರ ಮುಖಗಳನ್ನು ಕಂಡ ಉಪಪಾಂಡವರು ಮಾವನೊಡನೆ ನಿದ್ರೆಯಲ್ಲಿರುವಾಗಲೇ, ಶಿಬಿರ ಪ್ರವೇಶಿಸಿ ಅವರನ್ನು ಕೊರಿದ ಅಶ್ವತ್ಥಾಮನನ್ನು ಕೊಲ್ಲಲು ಭೀಮಾರ್ಜುನರು ಮುಂದಾದಾಗ ಗುರುನಂದನನ ಕೊಲ್ಲುವುದು ಅನುಚಿತವೆಂದು ಅವರನ್ನು ತಡೆಯುವ ಈ ದ್ರೌಪದಿ ಕ್ಷಮಯಾ ಧರಿತ್ರಿಯಂತೆ ಕಂಡುಬರುತ್ತಾಳೆ.

ಹೀಗೆ ತನ್ನ ವಿಶಿಷ್ಟಗುಣಗಳಿಂದ ಮಹಾಭಾರತದ ಮಹಾನಾಯಕಿಯಾದ ಈ ಕೃಷ್ಣ ಸುಂದರಿ "ಸುಂದರಿ" ಗಿಂತ ಹೆಚ್ಚಾಗಿ ಮಾನಿನಿಯಾಗಿದ್ದಾಳೆ. ಐವರು ಗಂಡಂದಿರ ಸುಖದಲ್ಲಿ ಭಾಗಿಯಾದ ಪತಿ ಪರಾಯಣೆಯಾಗಿದ್ದಾಳೆ. ಅಭಿಮಾನಿಯಾಗಿದ್ದಾಳೆ. ಅನ್ಯಾಯದ ವಿರುದ್ಧ ಒಂಟಿ ಧ್ವನಿಯನ್ನು ಎತ್ತಿದ ಪೌರುಷವಂತೆಯಾಗಿದ್ದಾಳೆ.



# ಬ್ಲಾಕ್‌ಸ್ಯಾಷ್-ಶೋಷಿತರ ಸಂಗಾತಿ

ಕಳೆದ 35 ವರ್ಷಗಳಿಂದ 'ಬ್ಲಾಕ್‌ಸ್ಯಾಷ್' ದಕ್ಷಿಣ ಆಫ್ರಿಕಾದಲ್ಲಿ ವರ್ಣದ್ವೇಷದ ವಿರುದ್ಧ ಅಹಿಂಸಾಯುತ ಹೋರಾಟವನ್ನು ನಡೆಸುತ್ತಾ ಬಂದಿದೆ. 1955ರಲ್ಲಿ ಆರಂಭವಾದ ಈ ಸಂಸ್ಥೆ ಆರು ಜನ ಮಧ್ಯಮ ವರ್ಗದ ಮಹಿಳೆಯರ ಪ್ರಯತ್ನದ ಫಲ. ಕಪ್ಪು ಜನರ ಪೌರ ಹಕ್ಕುಗಳ ರಕ್ಷಣೆಗಾಗಿ ದುಡಿಯುವ ಧ್ಯೇಯ ಹೊತ್ತು ಈ ಸಂಘಟನೆ ಕಾರ್ಯ ನಿರ್ವಹಿಸುತ್ತಿದೆ.

1955ರಲ್ಲಿ ಸರ್ಕಾರವು ಕಪ್ಪು ಜನರ ಕಣ್ಣೊರೆಸುವ ಸಲುವಾಗಿ ಕಾನೂನಿನಲ್ಲಿ ಎಷ್ಟೇ ಬದಲಾವಣೆಗಳನ್ನು ತಂದರೂ, ಅದರ ಸತ್ಯವನ್ನರಿತು ಅವುಗಳ ವಿರುದ್ಧ ಪ್ರತಿಭಟನೆಯನ್ನು ಏರ್ಪಡಿಸಿದವು. ಕೇಪ್ ಪಟ್ಟಣದ ಶಾಸನ ಸಭೆಗಳಲ್ಲಿ ಸಾರ್ವಜನಿಕ ಗ್ಯಾಲರಿಗಳ ಹತ್ತಿರ ಈ ಸಂಸ್ಥೆಯ ಸದಸ್ಯರು ನಿಂತುಕೊಂಡು ಶ್ವೇತ ವಸ್ತ್ರಧಾರಿಗಳಾಗಿ ಒಂದು ಭುಜದಿಂದ ಇನ್ನೊಂದು ಕಡೆ ನಡುವಿನವರೆಗೂ ಕಪ್ಪು ಬಟ್ಟೆಯನ್ನು ಧರಿಸಿ ಸಾರ್ವಜನಿಕ ಪ್ರದೇಶಗಳಲ್ಲಿ ಗಂಭೀರವಾಗಿ ನಿಲ್ಲುತ್ತಿದ್ದರು.

1976ರಲ್ಲಿ ಜಾರಿಯಾದ ಶಾಂತಿ ಮತ್ತು ಶಿಸ್ತಿನ ಕಾನೂನು ಈ ಸದಸ್ಯರು ಗುಂಪಾಗಿ ಪ್ರದರ್ಶನ ಮಾಡುವುದನ್ನು ವಿರೋಧಿಸಿತು. ಸರ್ಕಾರ ಬಹಿರಂಗ ಕೂಟಗಳನ್ನೆಲ್ಲ ನಿಷೇದಿಸಿತು. ಕೂಟ ಎಂದರೆ ಒಬ್ಬರಿಗಿಂತ ಹೆಚ್ಚು ಜನ ಸೇರುವುದು ಎಂದಾಗಿರುವುದರಿಂದ ಈ ಸಂಸ್ಥೆಯ ಸದಸ್ಯರು ಒಬ್ಬೊಬ್ಬರಾಗಿ ಪ್ರತಿಭಟನೆಯ ಫಲಕಗಳನ್ನು ಹಿಡಿದುಕೊಂಡು ನಿಲ್ಲುತ್ತಿದ್ದರು. ವರ್ಣದ್ವೇಷಿ ಪದ್ಧತಿಯ ದುರಹಂಕಾರ ವರ್ತನೆ ಮತ್ತು ದೌರ್ಜನ್ಯಗಳಿಗೆ ಬಲಿಯಾಗುತ್ತಿದ್ದರು. ಆದರೂ ತಮ್ಮನ್ನು ನಿರಂತರವಾಗಿ ದಮನಮಾಡಲು ಬಂದವರನ್ನು ಕಂಡು ಅಂಜದೆ ತಮ್ಮ ಹೋರಾಟದ ಹಾದಿಯಲ್ಲಿ ಕೆಚ್ಚನ್ನು ತೋರಿದರು.

ವರ್ಣದ್ವೇಷಿ ಸರ್ಕಾರದ ಶಾಸನಗಳು, ವಸತಿಹೀನತೆ, ನಿವೃತ್ತಿವೇತನದ ಅಭಾವ-ಇವುಗಳೆಲ್ಲದರ ವಿರುದ್ಧವಾಗಿ ಹೋರಾಟ ನಡೆಸುತ್ತಿರುವ ಈ ಸ್ವಾತಂತ್ರ್ಯ ಸಮರದ ದೀಕ್ಷಾವಂತರಿಗೆ ನಮ್ಮ ಅಭಿನಂದನೆಯು ಸಲ್ಲಬೇಕು. ದಕ್ಷಿಣ ಆಫ್ರಿಕಾದಲ್ಲಿ ಅಧಿಕ ಸಂಖ್ಯೆಯಲ್ಲಿರುವ ಕಪ್ಪು ಜನರ ಆತ್ಮಾಭಿಮಾನವನ್ನು, ಘನತೆಯನ್ನು ಪುನರ್ ಸ್ಥಾಪಿಸಲು ಈ ಸಂಸ್ಥೆ ಮಾಡುತ್ತಿರುವ ಪ್ರಯತ್ನ ನಿಜಕ್ಕೂ ಪ್ರಶಂಸನೀಯ. 1983 ನೇ ಡಿಸೆಂಬರ್ 19ರಂದು 'ಆರ್ಗಸ್' ದಿನಪತ್ರಿಕೆಯ ಒಬ್ಬ ಬರಹಗಾರ ಇವರನ್ನು ಉದ್ದೇಶಿಸಿ ಹೀಗೆ ಬರೆದಿದ್ದಾರೆ :

"ದಕ್ಷಿಣ ಆಫ್ರಿಕಾದಲ್ಲಿ ಕಳೆದ ಇಪ್ಪತ್ತೆಂಟು ವರ್ಷಗಳಿಂದಲೂ ಪೌರ ಹಕ್ಕುಗಳಿಗೆ ಪ್ರತಿ ಬಾರಿ ಆಘಾತವುಂಟಾದಾಗಲೂ, ಜನಾಂಗೀಯ ನ್ಯಾಯಕ್ಕೆ ಸಂಚಕಾರ ಬಂದ ಪ್ರತಿಬಾರಿಯೂ, ಬ್ಲಾಕ್‌ಸ್ಯಾಷ್ ಜನರ ಪಕ್ಷ ವಹಿಸಿತು."

ಮೊದಲು ದಕ್ಷಿಣ ಆಫ್ರಿಕಾದಲ್ಲಿ ಶ್ವೇತ ಮಹಿಳೆಯರಿಗೆ ಮಾತ್ರ ಲಭ್ಯವಾಗಿದ್ದ ಸದಸ್ಯತ್ವ ನಂತರ ಎಲ್ಲ ಮಹಿಳೆಯರಿಗೂ ದೊರಕುವಂತಾಯಿತು. 1948ರಲ್ಲಿ ಚುನಾವಣೆಯಲ್ಲಿ ಸೋಲನ್ನೆದುರಿಸಿದ ಮಹಿಳೆಯರೇ ಇಲ್ಲಿಗೆ ಬಂದ ಮೊದಲ ಮಹಿಳೆಯರಾಗಿದ್ದಾರೆ.

1988ರಿಂದ ಉದ್ಯೋಗಸ್ಥ ಮಹಿಳೆಯರು ಅಧಿಕ ಸಂಖ್ಯೆಯಲ್ಲಿ ಈ ಚಳುವಳಿಗಳಲ್ಲಿ ಭಾಗವಹಿಸಿ ಅಗತ್ಯವಾದ ರಾಜಕೀಯ ಬದಲಾವಣೆಗಳನ್ನು ತರುವತ್ತ ತಮ್ಮ ಸಹಕಾರ ತೋರಿದ್ದಾರೆ. 'ಬ್ಲಾಕ್ ಸ್ಯಾಷ್' ಸದಸ್ಯತ್ವ 20.000 ಮಾತ್ರವೇ ಇದ್ದರೂ ದಕ್ಷಿಣ ಆಫ್ರಿಕೆಯ ರಾಜಕೀಯದಲ್ಲಿ ಈ ಸಂಸ್ಥೆಗಿರುವ ಪ್ರಭಾವ ಅಸಾಮಾನ್ಯವಾದದ್ದು.

ಮಹಿಳೆಯರಿಗೆ ಸಾರ್ವಜನಿಕ ವಿಷಯಗಳಲ್ಲಿ ಪಾತ್ರ ವಹಿಸುವ ಅಗತ್ಯವಿದೆ. ಬ್ಲಾಕ್‌ಸ್ಯಾಷ್ ಅಂಥವರಿಗೆ

ಬೆಂಬಲಕೊಟ್ಟು ಪ್ರೋತ್ಸಾಹಕೊಡುವುದರ ಮೂಲಕ ಸಾರ್ವಜನಿಕ ರಂಗದಲ್ಲಿ ಪ್ರಮುಖ ಪಾತ್ರವಹಿಸುತ್ತಿದೆ.

ಬ್ಲಾಕ್ ಸ್ಯಾಷ್ ಪಕ್ಷದ ಅಧ್ಯಕ್ಷೆ ಶ್ರೀಮತಿ ಬರ್ಟನ್ ಹೀಗೆ ಹೇಳುತ್ತಾರೆ : "ಬ್ಲಾಕ್ ಸ್ಯಾಷ್ ದಕ್ಷಿಣ ಆಫ್ರಿಕಾದಲ್ಲಿ ವರ್ಣದ್ವೇಷದ ಪೂರ್ಣಸ್ವರೂಪವನ್ನು ಅರ್ಥ ಮಾಡಿಕೊಳ್ಳುವತ್ತ ಇಟ್ಟ ಮೊದಲ ಹೆಜ್ಜೆ. ಈ ವಿಷಯವನ್ನು ಹೆಚ್ಚು ಹೆಚ್ಚು ತಿಳಿಯತೊಡಗಿದಹಡೆ, ಈ ಘೋರಾಟದಲ್ಲಿ ಯಾರಿಗೂ ಭಾಗಿಯಾಗದೇ ಇರಲು ಸಾಧ್ಯವಿಲ್ಲ."

ವರ್ಣದ್ವೇಷವನ್ನು ಬೆಂಬಲಿಸುವ ಇನ್ನೂ ಬಹು ಮಂದಿ ಬಿಳಿಯರಿಗೆ ಆಫ್ರಿಕದ ಬಹುಸಂಖ್ಯಾತ ಕಪ್ಪು ಜನರ ಸಂಕಷ್ಟ ತಿಳಿಸುವುದೇ ಬ್ಲಾಕ್‌ಸ್ಯಾಷ್‌ನ ಮುಖ್ಯ ಆಶಯ ಮತ್ತು ಧ್ಯೇಯಗಳಲ್ಲಿ ಒಂದು. ಕಪ್ಪು ಜನರು ವಾಸಿಸುವ ಪ್ರದೇಶಗಳಲ್ಲಿ ಭದ್ರತಾಪಡೆಗಳು ಸೃಷ್ಟಿಸುತ್ತಿರುವ ಹಿಂಸಾಕಾಂಡವನ್ನು ಬಹಳ ಮಂದಿ ಬಿಳಿ ಜನರು ಗ್ರಹಿಸುತ್ತಿಲ್ಲ. ಪತ್ರಿಕೆಗಳ ಸೆನ್ಸಾರ್‌ಷಿಪ್ ಹೇರುವುದು, ದಕ್ಷಿಣ ಆಫ್ರಿಕೆಯ ರೇಡಿಯೋ ಪ್ರಸಾರ ಸಂಸ್ಥೆಯ ಮೂಲಕ ಏಕಪಕ್ಷೀಯವಾದ ವಾರ್ತೆಗಳನ್ನು ಪ್ರಕಟಿಸುವುದೂ ಕೂಡ ಇದಕ್ಕೆ ಒಂದು ಕಾರಣವಾಗಿರಬಹುದು. ಆದ್ದರಿಂದ ಬಹುಪಾಲು ಬಿಳಿಯರಿಗೆ ಕಪ್ಪು ವರ್ಣೀಯರು ಎದುರಿಸುತ್ತಿರುವ ಹಿಂಸಾಚಾರದ ದೃಶ್ಯ ಸ್ಪಷ್ಟವಾಗಿಲ್ಲ. ಅವರಾದರೋ ಬಂಧನಕ್ಕೆ ಒಳಗಾಗಬಹುದೆಂಬ ಭಯದಿಂದ ತಮ್ಮ ಗುರುತಿನ ಚೀಟಿಗಳನ್ನು ಯಾವಾಗಲೂ ತಮ್ಮೊಡನೆ ಒಯ್ಯಬೇಕಾಗಿಲ್ಲ. ಪೌರಹಕ್ಕುಗಳನ್ನು ಮತ್ತು ಮಾನವ ಹಕ್ಕುಗಳನ್ನು ಆಫ್ರಿಕೆಯಲ್ಲಿ ಕಾನೂನಿನಿಂದಲೂ ಆಫ್ರಿಕನ್ನರಿಗೆ ನಿರಾಕರಿಸಲಾಗಿದೆಯಾದ್ದರಿಂದ, ಅವರು ತಮ್ಮ ಮಾತೃಭೂಮಿಯಲ್ಲಿಯೇ ಸ್ವತಂತ್ರ ಜೀವಿಗಳಾಗಿ ಬದುಕಲಾರದೇ ಹೋಗುತ್ತಿದ್ದಾರೆ.

1985ರಲ್ಲಿ ದಕ್ಷಿಣ ಆಫ್ರಿಕಾ ಸರ್ಕಾರವು ತುರ್ತು ಪರಿಸ್ಥಿತಿಯನ್ನು ಪ್ರಕಟಿಸಿ, ಪ್ರಜೆಗಳನ್ನು ನಿಯಂತ್ರಿಸಲು ಸೈನ್ಯವನ್ನು ಕಳಿಸಿಕೊಂಡಿತು. ಅವರು ಈಸ್ಟ್‌ಲ್ಯಾಂಡ್‌ನಲ್ಲಿರುವ ಡ್ಯೂಡೆಚಿ ಪಟ್ಟಣವನ್ನು ಮುಟ್ಟುಗೋಲು ಹಾಕಿದಾಗ ಕಲ್ಲುಗಳು ಬೀಸಿದ್ದಾರೆ, ಎಂಬ ನೆಪದಿಂದ 10ರಿಂದ 15 ವರ್ಷಗಳ ಹುಡುಗರನ್ನು ಸಾವಿರಾರು ಸಂಖ್ಯೆಯಲ್ಲಿ ಶಿಕ್ಷೆಗೆ ಒಳಪಡಿಸಿದರು. ತಂದೆ, ತಾಯಿಗಳು ತಮ್ಮ ಮಕ್ಕಳನ್ನು ಪೋಲೀಸರ ದೃಷ್ಟಿಯಿಂದ ರಕ್ಷಿಸುವುದಕ್ಕೋಸ್ಕರ ಗಂಡು ಹುಡುಗರಿಗೆ ಹುಡುಗಿಯರಿಗೆ ವೇಷ ಹಾಕಬೇಕಾಗಿ ಬಂತು. ಬ್ಲಾಕ್‌ಸ್ಯಾಷ್ ಸ್ಥಾಪನೆಯ ಸದಸ್ಯೆಯಲ್ಲಿ ಒಬ್ಬರಾದ ಶ್ರೀಮತಿ ಜೀನ್‌ಸಿಂಕ್ಲಿಯರ್‌ನಿಂದ ಅಧ್ಯಕ್ಷೆ ಪದವಿಯನ್ನು ಕೈಗೊಂಡ ಆಕೆಯ ಮಗಳು ಮಾಜಿ ಅಧ್ಯಕ್ಷೆ ಶ್ರೀಮತಿ ಷಿನಾ ಡೆಂಕೆನ್ ಒಂದು ಸಾರಿ ವಾರ್ಷಿಕ ಸಭೆಗಳಲ್ಲಿ ಮಾತನಾಡುತ್ತಾ ಮೇಲಿನ ವಿಷಯವನ್ನು ಪ್ರಸ್ತಾಪಿಸುತ್ತಾ "ಈ ಸಂಘಟನೆ ಯೂರೋಪಿನ ನಾಜಿಗಳು ಆಕ್ರಮಿಸುವುದನ್ನು, ಯಹೂದಿಗಳು ಬಚ್ಚಿಟ್ಟುಕೊಳ್ಳುವುದನ್ನು ನೆನಪಿಗೆ ತರುತ್ತದೆ," ಎಂದರು. ಮತ್ತೊಬ್ಬ ಪ್ರಖ್ಯಾತ ಸದಸ್ಯೆ ಶ್ರೀಮತಿ ಮೌಲಿ ಬ್ಲಾಕ್‌ಬರ್ನ್ 1986ರಲ್ಲಿ ಕಾರು ಅಪಘಾತದಲ್ಲಿ ಮರಣ ಹೊಂದಿದಾಗ 20,000 ಮಂದಿ ಆಫ್ರಿಕನ್ನರು ಶ್ರದ್ಧಾಂಜಲಿಯನ್ನು ಅರ್ಪಿಸುವುದಕ್ಕೆ ಅಂತ್ಯಕ್ರಿಯೆಗಳಿಗೆ ಹಾಜರಾದಾಗ ದಕ್ಷಿಣಾಫ್ರಿಕದ ಅಧಿಕಾರಿಗಳು ದೇಶದಲ್ಲಿ ಶಾಂತಿ ಮತ್ತು ಕಾನೂನಿಗೆ ಭಂಗವೇರ್ಪಡುತ್ತದೆಂಬ ನೆಪದಿಂದ ಆ ಮೆರವಣಿಗೆಯನ್ನು ನಿಷೇಧಿಸಿದರು.

1913ರಲ್ಲಿ ಜಾರಿಗೆ ಬಂದಿದ್ದ ಭೂ ಶಾಸನ ಆಫ್ರಿಕನ್ನರು ಭೂಮಿಯ ಒಡೆತನ ಹೊಂದುವುದನ್ನು, ಅವರು ಇಷ್ಟಬಂದಲ್ಲಿ ವಾಸಿಸುವುದನ್ನು ನಿಷೇಧಿಸಿತ್ತು. ಈ ಕರಾಳ ಶಾಸನ ಬಂದ ಎಪ್ಪತ್ತನೇ ವರ್ಷದಲ್ಲಿ, 1983ರಲ್ಲಿ ಬ್ಲಾಕ್‌ಸ್ಯಾಷ್ ಧೀರ ಮಹಿಳೆಯರು ಒಂದು ವಾರವನ್ನು ಶೋಕವಾರವಾಗಿ ಆಚರಿಸಿದರು. ಈ ಶಾಸನದಿಂದಾಗಿ ದಕ್ಷಿಣಾಫ್ರಿಕಾದ ಪಟ್ಟಣಗಳಲ್ಲಿ, ಅದರ ಸುತ್ತಮುತ್ತಲಿರುವ ಸ್ಥಳಗಳಲ್ಲಿ ಸಾವಿರಾರು ರಟ್ಟಿನ ಮನೆಗಳು ಬೆಳೆಯುವುದಕ್ಕೆ ಕಾರಣವಾಯಿತು. ವ್ಯವಸಾಯವು ಯಾಂತ್ರೀಕರಣಗೊಂಡಾಗ ಸಾವಿರಾರು ಪ್ರಜೆಗಳು ಉದ್ಯೋಗಕ್ಕೋಸ್ಕರ ಕುಟುಂಬಗಳೊಡನೆ ನಗರಕ್ಕೆ ಬರಲಾರಂಭಿಸಿದರು. ಉದ್ಯೋಗಕ್ಕಾಗಿ, ತಲೆಯ ಮೇಲೊಂದು ಸೂರಿಗಾಗಿ ಈ ಜನ ಪಟ್ಟ ಪಾಡು ಹೇಳಲಸಾಧ್ಯ. ದಕ್ಷಿಣಾಫ್ರಿಕ ಸರ್ಕಾರ ಮಾಡುವ ಶಾಸನಗಳೆಲ್ಲ ಬಹುಪಾಲು ಜನರ ಹಿತಕ್ಕೆ ವಿರುದ್ಧವಾಗಿದೆ. ಸರ್ಕಾರದ ಶಾಸನಗಳು ಅವರನ್ನು ರಕ್ಷಿಸುವ ಬದಲು ಭಕ್ಷಿಸುತ್ತಿವೆ.

ಬಿಳಿ ವರ್ಣೀಯರ ಪಕ್ಷಪಾತಿಗಳು ಬ್ಲಾಕ್‌ಸ್ಯಾಷ್ ಸದಸ್ಯರು ತೋರಿಸುವ ಕಪ್ಪುಜನರ ಮೇಲಿನ ಪ್ರೀತಿ ಕೇವಲ ಕೃತಕವಾದದ್ದು ಎಂದು ವಿಮರ್ಶಿಸುತ್ತಿದ್ದಾರೆ. ಈ ಸದಸ್ಯರನ್ನು ಕಮ್ಯೂನಿಸ್ಟರು, ಆಫ್ರಿಕನ್‌ನ್ಯಾಷನಲ್

ಕಾಂಗ್ರೆಸ್‌ನೊಂದಿಗೆ ಕೆಲಸ ಮಾಡುವವರು ಎಂದು ದೂಷಿಸುತ್ತಾರೆ. ಅಷ್ಟೇಅಲ್ಲ ಈ ಸಂಸ್ಥೆಯ ಸದಸ್ಯರು ಸಾವು, ಬೆದರಿಕೆಗೆ ಗುರಿಯಾಗುತ್ತಿದ್ದಾರೆ. ಕೆಲವು ಮುಖ್ಯ ಮುಖಂಡರ ಮನೆಗಳ ಮೇಲೆ ಸರ್ಕಾರವು ದಾಳಿ ನಡೆಸುತ್ತಿದೆ. ಕೆಲವು ವರ್ಷಗಳ ಕೆಳಗೆ ಜೋಹಾನ್ಸ್‌ಬರ್ಗ್‌ನಲ್ಲಿರುವ ಪ್ರಧಾನ ಕಾರ್ಯಾಲಯ ಬಾಂಬು ದಾಳಿಗೆ ಗುರಿಯಾಯಿತು. ಎಲಿಜಬೆತ್ ಬಂದರಿನಲ್ಲಿರುವ ಸಲಹಾಕಛೇರಿ ಆರು ತಿಂಗಳುಗಳಿಂದ ತೀವ್ರವಾದ ಬೆದರಿಕೆಗಳಿಗೆ ಗುರಿಯಾಗಿ ಗೂಂಡಾಗಳಿಂದ ಸುಡಲ್ಪಟ್ಟಿತು. ಇವೆಲ್ಲವಕ್ಕೂ ಎದೆಗುಂದದೆ ಬ್ಲಾಕ್‌ಸ್ಯಾಷ್ ಸದಸ್ಯರು ಎಡಬಿಡದೆ ತಮ್ಮ ಎಂದಿನ ಪ್ರದರ್ಶನಗಳನ್ನು,ಕಷ್ಟದಲ್ಲಿರುವವರಿಗೆ ನೆರವಾಗುವುದನ್ನು ನಿಲ್ಲಿಸಿಯೇ ಇಲ್ಲ. ನಿರಂತರವಾಗಿ ಬ್ಲಾಕ್‌ಸ್ಯಾಷ್ ಸದಸ್ಯರ ಮೇಲೆ ಅತ್ಯಾಚಾರಗಳು ನಡೆಯುತ್ತಿದ್ದರೂ ಬ್ಲಾಕ್‌ಸ್ಯಾಷ್‌ಸದಸ್ಯರು ಎಂದಿಗೂ ಹಿಂಪಡಿಯಿಟ್ಟಿಲ್ಲ.

ಈ ಸಂಸ್ಥೆಯ ಸದಸ್ಯೆಯೊಬ್ಬಾಕೆ ಮೊಯಿರಾ ಹೆಂಡರ್ಸ್‌ನ್‌ನ ಎಂಬಾಕೆ ಕೈದಿಯ ಮಕ್ಕಳ ಲಾಲನೆ ಪಾಲನೆ ನೋಡುವ, ಮಾಡುವ ವಿಭಾಗದಲ್ಲಿ ಕೆಲಸ ಮಾಡಿದ್ದಾರೆ. ಕೈದಿಗಳ ದುಃಸ್ಥಿತಿಯನ್ನು ಗಮನಿಸಿದ್ದ ಆಕೆ, ಒಮ್ಮೆ ರಾಬಿನ್ ದ್ವೀಪವನ್ನು ಸಂದರ್ಶಿಸಿದಾಗ, ಕೈದಿಗಳಿಗೆ ವಾರ್ತಾ ಪತ್ರಿಕೆಯನ್ನು ಕೊಡದೇ ಇರುವುದನ್ನು ಗಮನಿಸಿದರು. ತರುವಾಯ ಕೈದಿಗಳಿಗೆ ವಾರ್ತಾಪತ್ರಿಕೆಗಳು ಕೈಗೆಟುಕುವಂತೆ ಮಾಡುವುದರಲ್ಲಿ ಯಶಸ್ವಿಯಾದರು. ಈ ಕಾರ್ಯದಿಂದ ಕೈದಿಗಳಲ್ಲಿ ಬಂದ ಬದಲಾವಣೆ ತನಗೆಷ್ಟು ಸಂತೋಷವನ್ನು ತಂದಿದೆ ಎಂದು ಆಕೆ ಹೇಳಿದರು.

ಮಾನವೀಯ ಮೌಲ್ಯಗಳನ್ನು ಪ್ರೀತಿಸುವ ಸಲುವಾಗಿ ಕಾರ್ಯಾರಂಭ ಮಾಡಿದ ಬ್ಲಾಕ್‌ಸ್ಯಾಷ್ ಈಗ ದಕ್ಷಿಣ ಆಫ್ರಿಕೆಯಲ್ಲಿ ವರ್ಣಭೇಧಗಳು ಇಲ್ಲದಂತಹ ಪ್ರಜಾಪ್ರಭುತ್ವದ ರಾಜ್ಯ ಸ್ಥಾಪನೆಗಾಗಿ ನಡೆಯುತ್ತಿರುವ ರಾಜಕೀಯ ಬದಲಾವಣೆಗಳತ್ತಲೂ ತನ್ನ ಕಾರ್ಯಕ್ಷೇತ್ರವನ್ನು ವಿಸ್ತರಿಸಬೇಕಾಗಿದೆ. ಆದರೆ ತಮ್ಮ ಸುತ್ತಮುತ್ತಲ ರಾಜಕೀಯ ಬದಲಾವಣೆಗಳೇನಿದ್ದರೂ ಬ್ಲಾಕ್‌ಸ್ಯಾಷ್ ಸ್ವತಂತ್ರ ಸಂಘವಾಗಿ ಮುಂದುವರಿಯಬೇಕೆಂಬ ನಿರ್ಣಯವನ್ನು ತನ್ನ ವಾರ್ಷಿಕ ಸಭೆಯಲ್ಲಿ ತೆಗೆದುಕೊಂಡಿದೆ.

**ಅಮೂಲ್ಯವಾದ ಪರಿಶೋಧನೆಗಳು**

1982ರಲ್ಲಿ ಬ್ಲಾಕ್‌ಸ್ಯಾಷ್ ಪ್ರಕಟಿಸಿದ ಒಂದು ಹದಿನೆಂಟು ಪುಟಗಳ ಪುಸ್ತಕ ವಿಪರೀತವಾಗಿ ಖರ್ಚಾಯಿತು. ಈ ಪುಸ್ತಕ 10ನೇ ಸೆಕ್ಷನ್ ಹಕ್ಕುಗಳಿಗೆ ಅರ್ಹರಾದ ಆಫ್ರಿಕಾದ ಪ್ರಜೆಗಳಿಗೆ, ಕಪ್ಪುಜನರ ಚಲನಶೀಲತೆಯನ್ನು ನಿಯಂತ್ರಿಸುವ ಮಸೂದೆ ಶಾಸನವಾಗಿ ಜಾರಿಯಾಗುವ ಮೊದಲೇ ಆ ಹಕ್ಕುಗಳಿಗೋಸ್ಕರ ಅರ್ಜಿ ಕೊಡಬೇಕೆಂದು ಉಪದೇಶಿಸಿತು. ತರುವಾಯ ಬ್ಲಾಕ್‌ಸ್ಯಾಷ್ ಈ ವಿಷಯವನ್ನು ಅನೇಕ ಮಂದಿ ಉದ್ಯೋಗ ಸಂಸ್ಥೆಯ ಯಜಮಾನರಿಗೆ ಸಹ ಸ್ವಾಮ್ಯ ಸಂಸ್ಥೆಗಳಿಗೆ, ಕಾರ್ಮಿಕ ಸಂಸ್ಥೆಗಳಿಗೆ ಈ ವಿಷಯವನ್ನು ತಿಳಿಸಿ ಅವರ ಕೈ ಕೆಳಗಿರುವ ಉದ್ಯೋಗಸ್ಥರೆಲ್ಲರಿಗೂ ಈ ಚಿಕ್ಕ ಪುಸ್ತಕವನ್ನು ಕುರಿತು ಹೇಳುವಂತೆ ಕೋರಿತು. ಈ ಪುಸ್ತಕದಲ್ಲಿರುವ ಈ ಹಕ್ಕುಗಳನ್ನು ಹೊಂದಿದ ಆಫ್ರಿಕಾದ ಜನತೆ ತಮ್ಮ ಹೆಸರನ್ನು ಸರಿಯಾದ ಮತದಾರರ ಪಟ್ಟಿಯಲ್ಲಿ ನಮೂದಿಸದಿದ್ದಲ್ಲಿ ಅವರು ಶಾಶ್ವತವಾಗಿ ತಮ್ಮ ಸ್ವಸ್ಥಳಗಳಿಂದ ದೂರವಾಗುವರೆಂದು ವಿವರಿಸಲಾಗಿದೆ.

ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್ ಮತ್ತು ದಕ್ಷಿಣ ಆಫ್ರಿಕಾದ ಸರಕಾರದ ಮಧ್ಯೆ ಜರುಗಿದ ಚರ್ಚೆಗಳಲ್ಲಿ ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್‌ನ ಪ್ರತಿನಿಧಿಯಾಗಿದ್ದ ಡಾ॥ ಬೇಯರ್ಸ್‌ನಾಡೇ ಕೂಡ ಈ ವಾರ್ಷಿಕೋತ್ಸವದಲ್ಲಿ ಅತಿಥಿಯಾಗಿ ಇದ್ದರು. ಅವರು ಬ್ಲಾಕ್‌ಸ್ಯಾಷ್ ಕೊಟ್ಟ ಅಸಾಮಾನ್ಯವಾದ ಸಹಾಯವನ್ನು ಅಭಿನಂದಿಸುತ್ತಾ ಹೀಗೆ ಹೇಳಿದ್ದಾರೆ : "ಈ ಮಹಿಳೆಯರು ಬಲಿಷ್ಠವಾದ ತಂಡವಾಗಬಲ್ಲರು" ಆಕೆ ಬ್ಲಾಕ್ ಸ್ಯಾಷ್‌ಗಿರುವ ಮೂರು ಮುಖ್ಯವಾದ ಲಕ್ಷಣಗಳನ್ನು ವರ್ಣಿಸಿದರು.

1. ಮಹಿಳೆಯರ ಶಕ್ತಿ.
2. ಸಕ್ರಿಯರಾದ ಕಾರ್ಯಕರ್ತರನ್ನೊಳಗೊಂಡ ಮಹಿಳಾ ಶಕ್ತಿ.
3. ಭಾವನಾತ್ಮಕವಾಗಿ ಮತ್ತು ವೈಚಾರಿಕವಾಗಿ ಸ್ವಾತಂತ್ರ್ಯವನ್ನು ಅನುಭವಿಸುತ್ತಿರುವ ಮಹಿಳೆಯರ ಶಕ್ತಿ.

ಬ್ಲಾಕ್‌ಸ್ಯಾಷ್‌ನ ಕಾರ್ಯಸಾಧನೆಗಳು, ತ್ಯಾಗಬಲಿದಾನಗಳು ವ್ಯರ್ಥವಾಗಿಲ್ಲವೆಂದೇ ಹೇಳಬೇಕು.

ಸಂಗ್ರಹಾನುವಾದ **(ಛಾಯಾಬಬ್ಬರ್‌ಸಿಂಗ್)**
ಆಧಾರ : **ಸೇಚಾಬಾ**

# ಸ್ಪಂದನ

## ಅತ್ಯಾಚಾರಿಗೆ ಏನು ಶಿಕ್ಷೆ?

ಮಕ್ಕಳ ಮೇಲೆ ಅತ್ಯಾಚಾರ ಎಸಗುವಂಥ ಹೇಯ ಕೃತ್ಯಕ್ಕೆ ಎಂಥ ಶಿಕ್ಷೆ ವಿಧಿಸಬೇಕು ? ಇತ್ತೀಚೆಗೆ ದೆಹಲಿಯ ನ್ಯಾಯಾಧೀಶರೊಬ್ಬರು ಒಂದು ತೀರ್ಪು ನೀಡುವಾಗ ಅಂಥ ಅತ್ಯಾಚಾರಿಯನ್ನು ನಿರ್ವೀರ್ಯಗೊಳಿಸುವುದೇ ತಕ್ಕ ಶಿಕ್ಷೆ ಎಂದು ಹೇಳಿದ್ದಾರೆ. ಆದರೆ ಕಾನೂನಿನಲ್ಲಿ ಹಾಗೆ ಪ್ರಸ್ತಾಪ ಇಲ್ಲದಿರುವುದರಿಂದ ತಮ್ಮ ಮುಂದಿದ್ದ ಪ್ರಕರಣದಲ್ಲಿ ಅತ್ಯಾಚಾರಿಗೆ ಅವರು ಜೀವಾವಧಿ ಶಿಕ್ಷೆ ನೀಡಿದರು.

ಅತ್ಯಾಚಾರವೇ ಅತ್ಯಂತ ಹೇಯವಾದ ಕೃತ್ಯ. ಕೂಸಿನ ಮೇಲೆ ಕೂಡ ಅತ್ಯಾಚಾರ ಎಸಗಿರುವ ಬಗೆಗೆ ಪತ್ರಿಕೆಗಳಲ್ಲಿ ಓದುತ್ತಿರುತ್ತೇವೆ. ಇದು ಅತ್ಯಂತ ಘೋರವೆಂದು ಹೇಳಬೇಕಾಗಿಲ್ಲ. ಊಹಿಸಲಸಾಧ್ಯ ಕೂಡ. ಇಂಥ ಅತ್ಯಾಚಾರಿಗಳಿಗೆ ಏನು ಶಿಕ್ಷೆ ನೀಡಿದರೆ ಒಳಿತು ಎಂಬ ಪ್ರಶ್ನೆಗೆ ಸರಿಯಾದ ಉತ್ತರ ಇಂದಿಗೂ ಸಿಕ್ಕಿಲ್ಲ. ಇದರ ಬಗೆಗೆ ವ್ಯಾಪಕವಾಗಿ ಸಾರ್ವಜನಿಕವಾಗಿ ಚರ್ಚೆಯಾಗಬೇಕು.

ಕೆಲವು ದೇಶಗಳಲ್ಲಿ ಅತ್ಯಾಚಾರಿಯ ಲೈಂಗಿಕ ಅಂಗಚ್ಛೇಧದಂಥ ಶಿಕ್ಷೆಯೂ ಇದೆ. ಭಾರತದಲ್ಲಿ ಕೆಲವು ವರ್ಷಗಳ ತುರಂಗವಾಸ ಶಿಕ್ಷೆ, ಹೆಚ್ಚೆಂದರೆ ಜೀವಾವಧಿ ಶಿಕ್ಷೆಗೆ ಆದೇಶಿಸಿರುವ ಪ್ರಕರಣಗಳಿವೆ. ಅತ್ಯಾಚಾರಿ ಕೆಟ್ಟ ಗಳಿಗೆಯಲ್ಲಿ ಅಮಾನುಷ ಕೃತ್ಯ ಎಸಗಿಬಿಟ್ಟಿದ್ದಾನೆ. ಅವನ ಬಗೆಗೆ ಮಾನವೀಯ ದೃಷ್ಟಿ ಅಗತ್ಯ. ಅತ್ಯಾಚಾರಕ್ಕೆ ಒಳಗಾದ ಹೆಣ್ಣು ಕಾಲಕ್ರಮೇಣ ತನ್ನ ಬದುಕನ್ನು ಹಸನು ಮಾಡಿಕೊಳ್ಳಬಹುದು. ಅತ್ಯಾಚಾರಿಯನ್ನು ನಿರ್ವೀರ್ಯಗೊಳಿಸಿಬಿಟ್ಟರೆ ಅವನ ಇಡೀ ಬದುಕು ನಾಶವಾದಂತೆಯೆ ....ಎಂದೆಲ್ಲಾ ವಾದಿಸಿ ಪತ್ರಿಕೆಗಳಿಗೆ ಪತ್ರಬರೆದವರಿದ್ದಾರೆ. ಚಿಂತನಶೀಲರು ಈ ಬಗ್ಗೆ ಆಲೋಚಿಸಬೇಕು. ಅತ್ಯಾಚಾರಕ್ಕೆ ಒಳಗಾದ ಹೆಣ್ಣಿನ ಬದುಕು ಹಸನಾಗುವುದು ಎಂತು ಎಂಬುದಂತೂ ಅರ್ಥವಾಗದ್ದು. ಇದನ್ನು ನಾವು ಮಾನಸಿಕ ಹಾಗೂ ಸಾಮಾಜಿಕ ದೃಷ್ಟಿಕೋನದಿಂದ ನೋಡಬೇಕಾಗಿದೆ.

—ಗೌರಿ

## ಅನುಪಮಾ ಇನ್ನಿಲ್ಲ....



ಮಾರ್ಚ್ ತಿಂಗಳು ಬಂತೆಂದರೆ ಮಹಿಳಾ ದಿನಾಚರಣೆಯ ಕಾರ್ಯಕ್ರಮಗಳು ಎಲ್ಲೆಲ್ಲೂ. ಆಗ ಅನುಪಮಾ ನಿರಂಜನರ ಹೆಸರು ಪತ್ರಿಕೆಗಳಲ್ಲಿ ಕಾಣಿಸಿಕೊಳ್ಳುತ್ತಲೇ ಇರುತ್ತಿತ್ತು. 1991ರ ಮಾರ್ಚ್ ಬರಲಿದೆ. ಇನ್ನೆಲ್ಲಿ ಅನುಪಮಾ ? ಮಹಿಳೆಯರ ಪರವಾಗಿ ಯಾವಾಗಲೂ ಗಟ್ಟಿದನಿಯೆತ್ತುತ್ತಿದ್ದ ಅನುಪಮಾ ಇನ್ನಿಲ್ಲ.

ಐದು ವರ್ಷಗಳ ಹಿಂದೆ 'ಅಚಲ' ತನ್ನ ಹೊಸ ಹೆಸರಿನಿಂದ ಹೊರಬಂದಾಗ ಸಮಾರಂಭವೊಂದಲ್ಲಿ ಈ ಪತ್ರಿಕೆಯನ್ನು ಬಿಡುಗಡೆ ಮಾಡಿದ ಅನುಪಮಾ, ಅಂದಿನಿಂದ ಇಂದಿನವರೆಗೂ ಪತ್ರಿಕೆಯೊಡನೆ ನಿಕಟ ಸಂಬಂಧವಿರಿಸಿಕೊಂಡೇ ಬಂದಿದ್ದಾರು. ವಿಸ್ತಾರವಾದ ವಿಷಯ ವ್ಯಾಪ್ತಿಯಿಂದೊಡಗೂಡಿದ ಅವರ ಲೇಖನಗಳು 'ಅಚಲ'ದ ಹಲವಾರು ಸಂಚಿಕೆಗಳಲ್ಲಿ ಪ್ರಕಟವಾಗಿವೆ. ವೈದ್ಯಕೀಯ, ಮಹಿಳಾ ಚಳುವಳಿ, ಪುಸ್ತಕ ವಿಮರ್ಶೆ, ಹದಿಬದೆಯ ಧರ್ಮ, ಮಾಸ್ತಿಯವರ ಯಶೋಧರಾ, ಮುಂತಾದ ಸಾಹಿತ್ಯ ವಿಮರ್ಶೆಯ ಲೇಖನಗಳು ಅಚಲದಲ್ಲಿ ಪ್ರಕಟವಾಗಿವೆ.

ಅನುಪಮಾ ನಿರಂಜನರವರು ಕನ್ನಡದ ಜನಪ್ರಿಯ ಲೇಖಕಿ ಹಾಗೂ ವೈದ್ಯಕೀಯ ಲೇಖನಗಳನ್ನು ಬರೆದಿರುವ ಸಾಹಿತಿಯಾಗಷ್ಟೇ ಹೆಚ್ಚು ಗುರುತಿಸಲ್ಪಡುತ್ತಾರೆ. ಅನುಪಮಾರವರು ಈ ವಿಭಿನ್ನ ವ್ಯಕ್ತಿತ್ವದಿಂದಲೇ ಕನ್ನಡದ ಹಿರಿಯ ಲೇಖಕಿಯರಲ್ಲಿ ವಿಶಿಷ್ಟವಾಗಿ ನಿಲ್ಲುತ್ತಾರೆ. 1975ರಲ್ಲಿ ಕರ್ನಾಟಕದಲ್ಲಿ ನ್ಯಾಷನಲ್ ಫೆಡರೇಷನ್ ಆಫ್ ಇಂಡಿಯನ್ ವುಮೆನ್ ಕರ್ನಾಟಕ ಶಾಖೆ ಸ್ಥಾಪನೆಯಾದಾಗ ಅದರ ಮೊದಲ ಅಧ್ಯಕ್ಷೆಯಾಗಿ ಆಯ್ಕೆಯಾದವರು ಅವರು. ಇದೇ ಸಂಘಟನೆಯನ್ನು ಪ್ರತಿನಿಧಿಸಿ ಬರ್ಲಿನ್‌ನಲ್ಲಿ ನಡೆದ ಅಂತರರಾಷ್ಟ್ರೀಯ ಮಹಿಳಾ ಕಾಂಗ್ರೆಸ್‌ನಲ್ಲೂ ಭಾಗವಹಿಸಿದ್ದರು. 1981 ಜೂನ್‌ನಲ್ಲಿ ಬೆಂಗಳೂರಿನಲ್ಲಿ ಅಖಿಲಭಾರತ ಪ್ರಜಾಸತ್ತಾತ್ಮಕ ಮಹಿಳಾ ಸಂಘಟನೆಯ ಕರ್ನಾಟಕ ಘಟಕದ ಸ್ಥಾಪನಾ ಸಮಾವೇಶದ ಅಧ್ಯಕ್ಷತೆ ವಹಿಸಿದ್ದ ಅನುಪಮಾ ನಿರಂಜನರವರ ಕೆಲವು ಮಾತುಗಳನ್ನು ಗಮನಿಸಿದರೆ ಅವರ ಚಿಂತನೆಯ ಸೈದ್ಧಾಂತಿಕ ಸ್ಪಷ್ಟತೆಯ ಅರಿವಾಗುತ್ತದೆ :–

"ಕೃಷಿ ಮತ್ತು ಕೈಗಾರಿಕಾ ಕಾರ್ಮಿಕರು, ಕೂಲಿಕಾರರು ಸಣ್ಣ ಪುಟ್ಟ ಕಾರ್ಖಾನೆಗಳಲ್ಲಿ ದುಡಿಯುವವರು ಅಲ್ಲದೆ ಜೀವನದ ವಿವಿಧ ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಿರುವ ಮಹಿಳೆಯರು ತಮ್ಮ ತಮ್ಮ ವಲಯಗಳಲ್ಲಿ ಸಂಘಟಿತರಾಗಬೇಕು. ಇದರಿಂದ ಅವರಿಗೆ ಆತ್ಮವಿಶ್ವಾಸ ಮತ್ತು ಧೈರ್ಯ ಹುಟ್ಟುತ್ತವೆ. ಆಗ ತಮಗಾಗುತ್ತಿರುವ ಶೋಷಣೆಯನ್ನು ಖಂಡಿಸಿ, ಸಮಾನ ಹಕ್ಕುಗಳಿಗಾಗಿ ಅವರು ಹೋರಾಡಲು ಸಾಧ್ಯವಾಗುತ್ತದೆ. ಈ ಸಂಘಟನಾ ಹೋರಾಟಗಳಿಂದ ಸಣ್ಣ ಪುಟ್ಟ ಗೆಲುವು ಸಿಗಬಹುದು. ಆದರೆ ಇಷ್ಟಕ್ಕೆ ಅವರು ತೃಪ್ತರಾಗಬಾರದು. ಅಂತಿಮವಾದ ಗುರಿ ಅಸಮತೆಯ ಸಮಾಜದ ಬದಲಾವಣೆ ಎಂಬುದನ್ನು ನೆನಪಿನಲ್ಲಿಡಬೇಕು. ಪ್ರತಿಯೊಂದು ಹೋರಾಟವು ಈ ದಿಸೆಯಲ್ಲಿ ಇಡತಕ್ಕ ಒಂದು ಹೆಜ್ಜೆ ಎಂಬುದು ಜನರಿಗೆ ಸ್ಪಷ್ಟವಾಗಬೇಕು.

ಚಿಕ್ಕ ಪುಟ್ಟ ಕಾಯಿಲೆಗಳಿಗೆಲ್ಲಾ ನೋಯುವ, ಜೀವನದಲ್ಲಿ ಹತಾಶರಾಗುವ ಮಂದಿ ಅನುಪಮಾರ ಜೀವನದಿಂದ ಕಲಿಯುವುದು ಬೇಕಾದಷ್ಟಿದೆ. ಅವರ ನಲವತ್ತನಾಲ್ಕನೇ ವಯಸ್ಸಿಗೆ ಕ್ಯಾನ್ಸರ್‌ನ ಬ್ರಹ್ಮರಾಕ್ಷಸ ಬಂದು ಬಾಗಿಲು ತಟ್ಟಿದಾಗ ವಿಚಲಿತರಾಗಲಿಲ್ಲ. ಅದಕ್ಕೆ ಏಳು ವರ್ಷಗಳ ಮುಂಚೆಗೆ ಪತಿ ನಿರಂಜನರಿಗೆ ಪಾರ್ಶ್ವವಾಯು ಬಡಿದಾಗಿನ ಆಘಾತವನ್ನು ನುಂಗಿ ನಂಜುಂಡಿಯಾಗಿದ್ದರು. ಅವರ ಧೈರ್ಯ, ಸಹನೆಯ ಪರೀಕ್ಷೆಗೆಂದೋ ಏನೋ ಕ್ಯಾನ್ಸರ್ ಮತ್ತೆ ಮತ್ತೆ ಭೇಟಿ ನೀಡಿತು. ಆದರೆ ಅನುಪಮಾ ಅವರದು ಲವಲವಿಕೆಯ ಜೀವ. ಸಾವು ತೀರ ಸನಿಹಕ್ಕೆ ಬಂದಾಗಲೂ ವಿಚಲಿತರಾಗಲಿಲ್ಲ. ಆದರೆ ಕ್ಯಾನ್ಸರ್‌ನ ಬ್ರಹ್ಮರಾಕ್ಷಸ ಅನುಪಮಾರವರ ಸಂಕಲ್ಪಶಕ್ತಿಗೆ ಸವಾಲೆಸೆಯುವಂತೆ ಗರ್ಭಕೋಶ, ಅಂಡಾಶಯ, ಸ್ತನ, ಕಂಕುಳು ಎಲ್ಲವನ್ನೂ ಆಕ್ರಮಿಸಿದಾಗ ಸುಸ್ತಾದರು. ತಮ್ಮ ಹೋರಾಟ ಬದುಕಿಗೆ ಫೆಬ್ರವರಿ 14 ರಂದು ಕೊನೆ ಹಾಡಿದರು.

ಸಾಹಿತಿ ಅನುಪಮಾ 51 ಕೃತಿಗಳನ್ನು ರಚಿಸಿದ್ದರು. 1952ರಲ್ಲಿ ಪ್ರಕಟವಾದ ಅವರ ಮೊದಲ ಕೃತಿ 'ಕಣ್ಮಣಿ' ಯಿಂದ ಹಿಡಿದು ಇತ್ತೀಚಿನ ಮೂಲಮುಖಿ ಬರಹಗಾರ್ತಿಯ ಬದುಕು ಕೃತಿಯವರೆಗೂ ಅವರು ಸಕ್ರಿಯ ಬರಹಗಾರ್ತಿಯಾಗಿಯೇ ಉಳಿದವರು. ಸುಮಾರು ನಲವತ್ತು ವರ್ಷಗಳ ಈ ಬರಹದ ಅವಧಿಯಲ್ಲಿ ಅವರು ವಿವಿಧ ವಯೋಮಾನದ ದೃಷ್ಟಿಕೋನದ ಬರಹಗಾರ್ತಿಯರೊಂದಿಗೆ ಸಮಾನ ಸ್ನೇಹಭಾವವನ್ನು ಬೆಳೆಸಿಕೊಂಡು ಬಂದದ್ದು ವಿಶೇಷವೇ ಸರಿ. ಕಾಲದ ಪ್ರವಾಹದಲ್ಲಿ ಕೊಚ್ಚಿಹೋಗಿದ್ದರೂ, ಕಾಲದ ಅಗತ್ಯಕ್ಕೆ ತಕ್ಕಂತೆ ಬದಲಾಗುತ್ತಲೇ ಬಂದರು. ಅವರದು ಯಾವಾಗಲೂ ಊರ್ಧ್ವಮುಖಿ ಚಲನೆಯೇ. ಉತ್ತಮವಾದುದನ್ನು ಬಯಸುವ, ಬರೆಯುವ ಮಹತ್ವಾಕಾಂಕ್ಷೆಯುಳ್ಳವರಾಗಿದ್ದರು. ಲೇಖಕಿಯರಿಗೆ ಸರಿಯಾದ ಪ್ರಾಶಸ್ತ್ಯ ಸಿಗುತ್ತಿಲ್ಲ ಎಂಬುದು ಅವರ ಕೊರಗಾಗಿತ್ತು. ಅದಕ್ಕಾಗಿ ಅವರು ಹಲವರ ಆಕ್ಷೇಪಣೆಗೆ ಗುರಿಯಾಗಬೇಕಾಗಿ ಬಂದರೂ ವಿಚಲಿತರಾಗಲಿಲ್ಲ. ತಮ್ಮ ಸ್ತ್ರೀಪರ ಆಲೋಚನೆಗಳನ್ನು ಅವರು ತಮ್ಮ ಮುಖ್ಯ ಕಾದಂಬರಿ ಸ್ತ್ರೀ ಪಾತ್ರಗಳ ಮೂಲಕ ಹೇಳಿದ್ದಾರೆ.

ಕನ್ನಡದ ಜನತೆಯ ಅದರಲ್ಲೂ ಬಹುಪಾಲು ಮಹಿಳೆಯರ ಕಣ್ಮಣಿಯಾದ ಅನುಪಮಾರವರಿಗೆ, ಅವರೆಲ್ಲರ ತುಂಬು ಪ್ರೀತಿಯ ಅಭಿಮಾನ, ಆದರ ದೊರತಿದೆ. 1978ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಮತ್ತು ಸೋವಿಯತ್ ಲ್ಯಾಂಡ್ ನೆಹರೂ ಪ್ರಶಸ್ತಿ, 1983ರಲ್ಲಿ ಕನ್ನಡ ರಾಜ್ಯೋತ್ಸವ ಪ್ರಶಸ್ತಿ ಮತ್ತು 1987ರಲ್ಲಿ ಅವರ 'ನೆನಪು ಸಿಹಿ–ಕಹಿ' ಆತ್ಮಚರಿತ್ರೆಗೆ ಶಾಶ್ವತಿಯರ ನಂಜನಗೂಡು ತಿರುಮಲಾಂಬ ಪ್ರಶಸ್ತಿಗಳು ದೊರೆತಿವೆ.

ಸ್ವತಃ ವೈದ್ಯೆಯಾದ ಅನುಪಮಾ ಜೀವನದಲ್ಲಿ ವೈಜ್ಞಾನಿಕ ಮೌಲ್ಯಗಳನ್ನು ನಂಬಿ ಬಾಳಿದವರು. ಪತಿ

ನಿರಂಜನರ ನಾಸ್ತಿಕವಾದದ ಮೌಲ್ಯಗಳು ಅವರನ್ನು ಆರಂಭದಲ್ಲಿ ಆಕರ್ಷಿಸಿದುವಾದರೂ ನಂತರದಲ್ಲಿ ಸ್ವಯಂ ಇಚ್ಛೆಯಿಂದ ತಮ್ಮ ಜೀವನದಲ್ಲೂ ಅದನ್ನು ಅಳವಡಿಸಿ ಕೊಂಡವರು ಅನುಪಮಾ. ಇವರು ತಮ್ಮ ವೈದ್ಯಕೀಯ ಹಾಗೂ ವೈಚಾರಿಕ ಲೇಖನಗಳಿಂದ ಯುವಜನಾಂಗದಲ್ಲಿ ಮೂಢನಂಬಿಕೆ ತೊಲಗಿಸಿ ವೈಜ್ಞಾನಿಕ ಮನೋಭಾವ ತುಂಬುವಲ್ಲಿ ನೆರವಾದರು. ಬೆಂಗಳೂರು ವಿಶ್ವವಿದ್ಯಾ ನಿಲಯದವರು ಪವಾಡಗಳು ಮತ್ತು ಮೂಢನಂಬಿಕೆಗಳ ವಿರುದ್ಧ ನಡೆಸಿದ್ದ ಆಂದೋಲನದಲ್ಲಿಯೂ ಸಮಿತಿಯ ಸದಸ್ಯೆಯಾಗಿ ಭಾಗವಹಿಸಿದ್ದರು. ಇವರ ಬದುಕು-ಬರಹದ ಕನಸುಗಳು ಅವರಿಬ್ಬರ ಹೆಣ್ಣುಮಕ್ಕಳ ಜೀವನದಲ್ಲಿ ಮೂರ್ತರೂಪ ಪಡೆಯುತ್ತಿವೆ.

ಅನುಪಮಾರವರಿಗೆ ಅನಾರೋಗ್ಯವೆಂದಾಗ ಪ್ರತಿ ಬಾರಿಯೂ ಮೃತ್ಯುಂಜಯರಂತೆ ಪುಟಿದೆದ್ದು ಚೇತರಿಸಿ ಕೊಂಡು ಬರುತ್ತಿದ್ದ ಅನುಪಮಾ ಇನ್ನಿಲ್ಲ ಎಂದು ನಂಬುವುದೇ ಕಷ್ಟ. ಆದರೂ ಅವರಿಗೆ ಅಂತಿಮ ವಿದಾಯ ಹೇಳಿ ಬಂದದ್ದಾಗಿದೆ. ಶಾಸ್ತ್ರ, ಮಂತ್ರಗಳಿಲ್ಲದೆ, ಆತ್ಮೀಯ ಹಿತೈಷಿಗಳ ನಡುವೆ ಸರಳವಾಗಿ ಚಿತೆಯೇರಿ ನಿಂತ ಅನುಪಮಾರವರ ಚಿತ್ರ ಇನ್ನೂ ನೆನಪಿನಲ್ಲೇ ಇದೆ.

---

(4ನೇ ಪುಟದಿಂದ) **ಆಸ್ತಿಯ ಒಡೆತನ ?**

ಕಾರಿ ಹೆಜ್ಜೆ. ಶತಮಾನಗಳ ಅನ್ಯಾಯವನ್ನು ನಿವಾರಿಸುವತ್ತ ಇಡುವ ಪ್ರಮುಖವಾದ ಹೆಜ್ಜೆ. ಮಹಿಳೆಯರು ಸಾಧಿಸುವ ತಾತ್ವಿಕ ವಿಜಯ.

ಪಿತ್ರಾರ್ಜಿತ ಆಸ್ತಿಯಲ್ಲಿ ಹೆಣ್ಣಿಗೆ ಸಮಾನ ಹಕ್ಕು ಕೊಡುವ ತಿದ್ದುಪಡಿಯಷ್ಟರಿಂದಲೇ ಆ ಕಾನೂನಿನ ಲಾಭ ಹೆಣ್ಣುಮಕ್ಕಳಿಗೆ ದಕ್ಕಿಬಿಡುತ್ತದೆಂದು ಭಾವಿಸುವುದು ತಪ್ಪಾಗುತ್ತದೆ. ಈಗಿರುವ ಕುಟುಂಬದ ಮತ್ತು ವಿವಾಹ ಸಂಸ್ಥೆಯ ಸ್ವರೂಪವೇ ಮುಂದುವರಿದಲ್ಲಿ ಪುರುಷರಿಂದ ವಿರೋಧ ಬರುವುದು ಸಹಜವೇ. ಮಹಿಳಾ ವಿದ್ಯಾಭ್ಯಾಸ, ಮಹಿಳಾ ಉದ್ಯೋಗ, ಸರಳ ವಿವಾಹ, ಕುಟುಂಬದ ಎಲ್ಲ ರೀತಿಯ ಜವಾಬ್ದಾರಿಗಳನ್ನು ಸಮನಾಗಿ ಹಂಚಿಕೊಳ್ಳುವ ಮನೋಭಾವ-ಇವೆಲ್ಲವೂ ದಿಡೀರ್ ಕ್ರಮಗಳಾಗದಿದ್ದರೂ ಹಂತ ಹಂತವಾಗಿ ನಡೆಯಬೇಕಾಗಿದೆ.

ಇಷ್ಟೆಲ್ಲ ಮಾತಿನ ನಂತರವೂ ಕೊನೆಯದೊಂದು ಸತ್ಯ ಉಳಿಯುತ್ತದೆ : ಹೆಣ್ಣು ಗಂಡಿನ ಸಮಸ್ಯೆಗಳಿಗೆ ಪರಿಹಾರ ದೊರೆಯುವುದು ಆಸ್ತಿರಹಿತ ಸಮಾಜದಲ್ಲಿ ಮಾತ್ರ. ಹಾಗೆಯೇ ಆ ಆಸ್ತಿ ರಹಿತ ಸಮಾಜ ಸೃಷ್ಟಿಯತ್ತ ಈ ಕಾಯಿದೆ ಒಂದು ಹೆಜ್ಜೆಯೂ ಆಗಬಲ್ಲದು.

— **ಎನ್. ಗಾಯತ್ರಿ**

---

*Reg. No. MAG (5) PRC. DECL 036/86-87*

BOOK-POST/PERIODICALS

**To.** [illegible]

If undelivered please return to :
**Jagruthi Mahila Adhyayana Kendra**
26, 1st Main Road, Vyalikaval
Bangalore-560 003